CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೮, ೨೦೦೫ (ಭಾದ್ರಪದ ೧೭, ಶಕ ವರ್ಷ ೧೯೨೭) | ಸಂಚಿಕೆ ೩೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ

**ಸಂಖ್ಯೆ: ಎ1.71ಎ.ಅಮೊ.43/2001-02, ದಿನಾಂಕ: 15ನೇ ಜುಲೈ 2005**

**ಉಪಸ್ಥಿತರು:** ಶ್ರೀ ಕೆ.ಎನ್. ಲಕ್ಷ್ಮೀನಾರಾಯಣ,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲಾ.

**ಪ್ರಸ್ತಾವನೆ:**

ದಿನಾಂಕ: 07.09.2001 ರಂದು ಎರಡು ಅಂಬಾಸಿಡರ್ ಕಾರು ನೋಂದಣಿ ಸಂಖ್ಯೆ: ಎಂ.ವೈ.ಈ-5766 ಮತ್ತು ಕೆಎ.14.ಎಂ.1708 ರಲ್ಲಿ ಕ್ರಮವಾಗಿ 16 ಮತ್ತು 20 ಕೆಜಿ ತೂಕದ ಶ್ರೀಗಂಧವನ್ನು ಯಾರೋ ಅಸಾಮಿಗಳು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿ ವಿದ್ಯಾನಗರದ ಒಂದನೇ ತಿರುವು ಮೈಲಾರೇಶ್ವರ ನಿಲಯದ ವಾಸಿ ಶ್ರೀ ಜಿ. ಅರವಿಂದ ಬಿನ್ ಕೃಷ್ಣಭಟ್ಟ ರವರ ಮನೆಯ ಮುಂದಿನ ಪ್ರದೇಶದಲ್ಲಿ ಸಾಗಾಣಿಕೆಗೆ ಸಿದ್ದವಾಗಿದ್ದ ವಾಹನಗಳನ್ನು ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ, ವಾಹನ ಮತ್ತು ಶ್ರೀಗಂಧವನ್ನು ಸರ್ಕಾರದ ಪರ ವಶಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಮತ್ತು ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ: 43/01-02ನ್ನು ದಾಖಲು ಮಾಡಿಕೊಂಡು ವಾಹನ ನೋಂದಣಿ ಸಂಖ್ಯೆ: ಎಂ.ವೈ.ಈ-5766ರ ಇಂಜಿನ್ ನಂ.ಒಡಿಎಫ್.52269 ಛಾಸ್ಸಿ ಸಂಖ್ಯೆ: 111-420301 ಹಾಗೂ ನೋಂದಣಿ ಸಂಖ್ಯೆ: ಕೆಎ.14.ಎಂ.1708ರ ಇಂಜಿನ್ ನಂ.6೩ ಡಿಎಯು.117020 ಛಾಸ್ಸಿ ಸಂಖ್ಯೆ: ಎಎಯು.707648 ಎಂದಿರುತ್ತದೆಂದು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಯಾರು ಪತ್ತೆಯಾಗಿರುವುದಿಲ್ಲವೆಂದು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನಗಳನ್ನು ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಕುರಿತು ಮುಂದಿನ ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಈ ಪ್ರಾಧಿಕಾರಕ್ಕೆ ದಿನಾಂಕ: 07.09.2001 ರಂದು ಹಾಜರ್ ಪಡಿಸಿರುತ್ತಾರೆ. ಅದರಂತೆ ಸದರಿ ವಾಹನಗಳನ್ನು ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗರವರ ಸುಪರ್ದಿಯಲ್ಲಿ ಸುರಕ್ಷತೆಯ ಬಗ್ಗೆ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ ವಾಹನ ಮಾಲೀಕರು ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ ಮೂಲ ದಾಖಲಾತಿಗಳೊಂದಿಗೆ ಹಕ್ಕುಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ: 22.09.2001ರ ಸಾಗರ ಸಂದೇಶ ದಿನ ಪತ್ರಿಕೆಯಲ್ಲಿ ಮತ್ತು ದಿನಾಂಕ: 24.09.2001ರ ಛಲದಂಕಮಲ್ಲ ಕನ್ನಡ ದಿನ ಪತ್ರಿಕೆಯಲ್ಲಿ ಹಾಗೂ ನವೆಂಬರ್-15-2001ರ ಭಾಗ-3 ಪುಟ ಸಂಖ್ಯೆ: 2683ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನ ನೋಂದಣಿ ಸಂಖ್ಯೆ: ಎಂ.ವೈ.ಈ-5766 ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಕಾರವಾರ ಅವರಿಗೆ ಪತ್ರ ವ್ಯವಹರಿಸಿದಾಗ, ಸದರಿಯವರು ತನ್ನ ದಿನಾಂಕ: 14.09.2001ರ ಪತ್ರದಲ್ಲಿ ಸದರಿ

ವಾಹನವು ದಿನಾಂಕ: 01.01.96 ರಲ್ಲಿ ಕ್ಲಿಯರೆನ್ಸ್ ಪಡೆದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಉಡುಪಿಗೆ ಹೋದ ಕಾರಣ ಉಡುಪಿಯಲ್ಲಿ ಸಂಪರ್ಕಿಸುವಂತೆ ತಿಳಿಸಿದನ್ವಯ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿಯಲ್ಲಿ ಪತ್ರ ವ್ಯವಹರಿಸಿದಾಗ ಸದರಿಯವರು ತನ್ನ ದಿನಾಂಕ: 07.01.2003ರ ಪತ್ರದಲ್ಲಿ ಎಂ.ವೈ.ಈ-5766 ತನ್ನ ಕಛೇರಿಯ ವ್ಯಾಪ್ತಿಗೆ ಬಂದಿರುವುದು ಕಂಡು ಬರುವುದಿಲ್ಲವೆಂದು ತಿಳಿಸಿರುತ್ತಾರೆ.

ಮುಂದುವರಿದು ಕೆಎ-14-ಎಂ-1708 ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ರವರಲ್ಲಿ ಪತ್ರ ವ್ಯವಹರಿಸಿದಾಗ, ಸದರಿ ಅಧಿಕಾರಿಗಳು ದಿನಾಂಕ: 23.04.2002ರ ಪತ್ರದಲ್ಲಿ ಕೆಎ-14-ಎಂ.1708 ವಾಹನದ ಬಿ ವರದಿಯನ್ನು ಈ ಕಛೇರಿಗೆ ಕಳುಹಿಸಿಕೊಟ್ಟಿರುತ್ತಾರೆ. ಅದರಂತೆ ವಾಹನ ಮಾಲೀಕರಾದ ಶ್ರೀ ಎ.ಎಸ್. ಗೋಪಿನಾಥ್ ಬಿನ್ ಶ್ರೀಪತಿರಾವ್, ಎಂಐಜಿ:255 ಕಲ್ಲಹಳ್ಳಿ 1ನೇ ಘಟ್ಟ, ವಿನೋಬನಗರ, ಶಿವಮೊಗ್ಗ ರವರಿಗೆ ಹಾಗೂ ವಾಹನ ಹೈಪಾಥಿಕೇಶನ್ ನೀಡಿದ ವಿಜಯ ಬ್ಯಾಂಕ್, ಎಸ್.ಆರ್. ರಸ್ತೆ, ಶಿವಮೊಗ್ಗ ರವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳುವ ಪತ್ರವನ್ನು ಜಾರಿಮಾಡಲಾಯಿತು. ವಾಹನ ಮಾಲೀಕರಾದ ಶ್ರೀ ಎ.ಎಸ್. ಗೋಪಿನಾಥ್ ರವರು ದಿನಾಂಕ: 15.05.2002 ರಂದು ಈ ಪ್ರಾಧಿಕಾರಕ್ಕೆ ಬರೆದ ಪತ್ರದಲ್ಲಿ ಸದರಿ ವಾಹನವನ್ನು ಸೈಯದ್ ಹಮೀರ್ ಬಿನ್ ಬಾಬಾಸಾಬ್ ಅಣ್ಣಾನಗರ, 1ನೇ ಕ್ರಾಸ್, ಶಿವಮೊಗ್ಗ ರವರಿಗೆ ದಿನಾಂಕ: 20.05.2001 ರಂದು ಮಾರಾಟ ಮಾಡಿದ್ದೇನೆ ಈ ಸಂಬಂಧ ವಾಹನ ಮಾರಾಟದ ಜಂಟಿ ಒಪ್ಪಂದ ಪತ್ರದ ಪ್ರತಿಯನ್ನು ಲಗತ್ತಿಸಿದೆ ಹಾಗೂ ಸದರಿ ವಾಹನಕ್ಕೆ ನನಗೂ ಸಂಬಂಧವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆ ಪ್ರಕಾರ ಸೈಯದ್ ಅಮೀದ್ ಬಿನ್ ಬಾಬಾಸಾಬ್ ರವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 20.05.2002 ರಂದು ಮತ್ತು ದಿನಾಂಕ: 27.08.2002 ರಂದು ಎರಡು ಬಾರಿ ನೋಟೀಸ್ ಕಳುಹಿಸಿದ್ದು, ನೋಟೀಸ್ ಜಾರಿಯಾಗದೆ ವಾಪಸ್ಸು ಬಂದಿರುತ್ತದೆ.

ಈ ಮಧ್ಯೆ ಸದರಿ ವಾಹನಕ್ಕೆ ಹೈಪಾತಿಕೇಶನ್ (ಆಧಾರ ನೀಡಿದ) ಬ್ಯಾಂಕಾದ ವಿಜಯಬ್ಯಾಂಕ್, ಎಸ್.ಆರ್. ರಸ್ತೆ, ಶಿವಮೊಗ್ಗ ರವರು ದಿನಾಂಕ: 29.04.2002 ರಂದು ಈ ಪ್ರಾಧಿಕಾರದಿಂದ ಕಳುಹಿಸಿದ ಪತ್ರಕ್ಕೆ ಉತ್ತರವಾಗಿ, ಸದರಿ ವಾಹನಕ್ಕೆ ಕರಾರು ಒಪ್ಪಂದ ರೀತ್ಯಾ ಸಾಲ ನೀಡಿದ್ದರಿಂದ ಸಾಲ ತೀರುವವರಿವಿಗೂ ಮಾಲೀಕರಾಗಿರುವುದರಿಂದ ವಾಹನವನ್ನು ಬ್ಯಾಂಕಿಗೆ ಬಿಡುಗಡೆಗೊಳಿಸುವಂತೆ ಖರಾರು ಒಪ್ಪಂದದ ಪ್ರತಿಯೊಂದಿಗೆ ಕೇಳಿಕೊಂಡಿರುತ್ತಾರೆ.

ಈ ಪ್ರಕರಣದ ವಿಚಾರಣಾ ಕಾಲಕ್ಕೆ ಅಭಿಯೋಗವು ಒಂದು ಸಾಕ್ಷಿಯನ್ನು ವಿಚಾರಣೆ ಮಾಡಿದ್ದು, ಪ್ರಾಸಿಕ್ಯೂಶನ್ ಸಾಕ್ಷಿ-1 ಶ್ರೀ ಎಂ.ಎನ್. ವಿಜಯಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಾಗಿದ್ದು, ಈ ಸಾಕ್ಷಿಯ ಮೂಲಕ ನಿಶಾನೆ-1 ರಿಂದ ನಿಶಾನೆ-5 ರವರೆಗೆ ದಾಖಲಾತಿಗಳನ್ನು ನಿಶಾನಿಸಲ್‌ಪಟ್ಟಿದ್ದು, ಮುದ್ದೆಮಾಲು ಎಂಒ 1 ರಿಂದ 4 ರವರೆಗೆ ಗುರುತಿಸಲ್ಪಟ್ಟಿದೆ. ಅರ್ಜಿದಾರರ ವಿಚಾರಣೆಗೆ ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ವಕೀಲರು ಹಾಜರಾಗಿದ್ದು, ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಿ ಹೇಳಿಕೆ ದಾಖಲಿಸಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶವನ್ನು ಹೊರಡಿಸಲು ಈ ಕೆಳಕಂಡ ಅಂಶವನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

1. ದಿನಾಂಕ: 07.09.2001 ರಂದು ಅಂಬಾಸೇಡರ್ ಕಾರು ನೋಂದಣಿ ಸಂಖ್ಯೆ: ಕೆಎ-14-ಎಂ-1708 ಮತ್ತು ಎಂ.ವೈ.ಈ-5766 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡಲಾಗಿದಿಯೇ?
2. ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಬಿ ಪ್ರಕಾರ ವಾಹನ ಮಾಲೀಕರಿಗೆ ಕಾರಣ ಕೇಳುವ ಪತ್ರವನ್ನು ನೀಡಲಾಗಿದಿಯೇ ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ಸದರಿ ವಾಹನದಲ್ಲಿ ಅಕ್ರಮ ಶ್ರೀಗಂಧ ಸಾಗಾಟದಲ್ಲಿ ತಮ್ಮ ತಿಳುವಳಿಕೆ ಬಾರದಂತೆ ಉಪಯೋಗಿಸಲ್ಪಟ್ಟಿದೆ ಎಂಬುದಾಗಿ ಮಾಲೀಕರು ಅಥವಾ ನೋಂದಣಿ ಮಾಲೀಕರಿಗೆ ಸಾಲ ನೀಡಿದ ಅದರ ಸುಪರ್ದಿ ಹೊಂದಿದ ಬ್ಯಾಂಕಿನವರು ಸಿದ್ದಪಡಿಸಿದ್ದಾರೆಯೇ?
4. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲೆ ತಿಳಿಸಿದ ಪರಿಶೀಲನಾಂಶವನ್ನು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಮತ್ತು ದಾಖಲಾತಿಗಳನ್ನು ಪರಿಶೀಲಿಸಿ, ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು - ಗುಣಾತ್ಮಕವಾಗಿ,
ಎರಡನೇ ಅಂಶವನ್ನು - ಗುಣಾತ್ಮಕವಾಗಿ,
ಮೂರನೇ ಅಂಶವನ್ನು - ನಕಾರಾತ್ಮಕವಾಗಿ
ನಾಲ್ಕನೇ ಅಂಶವನ್ನು - ಕೊನೆಯ ಆದೇಶದಂತೆ.

**ಅಂಶ-1:**

ಶ್ರೀ ಎಂ.ಎನ್. ವಿಜಯಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರು ಈ ಪ್ರಕರಣದ ಪಿರ್ಯಾದಿಯಾಗಿದ್ದು, ಸದರಿಯವರು ದಿನಾಂಕ: 22.01.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿರುತ್ತಾರೆ. ಅವರ ಹೇಳಿಕೆಯನ್ನು ಪ್ರಾ.ಸಾ-1 ಆಗಿ ಪಡೆಯಲಾಗಿದೆ. ಸದರಿಯವರು ದಿನಾಂಕ: 30.06.2000 ರಿಂದ 9.10.2002 ರವರೆಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯಾಗಿ ಅರಣ್ಯ ಸಂಚಾರಿ ದಳ, ಶಿವಮೊಗ್ಗದಲ್ಲಿ ಕರ್ತವ್ಯ ನಿರ್ವಹಿಸಿದ್ದೆ, ದಿನಾಂಕ: 07.09.2001 ರಂದು ವಿದ್ಯಾನಗರ ಬಡಾವಣೆಯ ಒಂದನೇ ಕ್ರಾಸಿನಲ್ಲಿ ಮೈಲಾರೇಶ್ವರ ನಿಲಯದ ಮುಂಭಾಗದಲ್ಲಿ ಶ್ರೀಗಂಧ ಕಳ್ಳತನವಾಗುತ್ತಿದೆ ಎಂಬುದಾಗಿ ಖಚಿತ ವರ್ತಮಾನದ ಮೇರೆಗೆ ಸುಮಾರು 1-30ರ ಸಮಯದಲ್ಲಿ ಸಿಬ್ಬಂದಿಯೊಂದಿಗೆ ಸದರಿ ಸ್ಥಳಕ್ಕೆ ಹೋಗಿ ಪರಿಶೀಲಿಸಿದಾಗ ಮೈಲಾರೇಶ್ವರ ನಿಲಯದ ಎದುರು ಎರಡು ಅಂಬಾಸೇಡರ್ ಕಾರು ನಿಂತಿರುವುದನ್ನು ಕಂಡು ಪರಿಶೀಲಿಸಿದಾಗ, ಸದರಿ ವಾಹನದಲ್ಲಿ ಯಾವುದೇ ಇಲಾಖಾ ಛಾಪಾ ಮುದ್ರೆ ಇರದ ಅಕ್ರಮವಾದ ಶ್ರೀಗಂಧವನ್ನು ತುಂಬಿರುವ ಚೀಲಗಳಿರುವುದು ಕಂಡು ಬಂದಿತು. ಈ ಬಗ್ಗೆ ವಾರಸುದಾರರನ್ನು ವಿಚಾರಿಸಿದಾಗ ಯಾರು ಇಲ್ಲವೆಂದು ತಿಳಿದು, ಕಾರು ನಿಂತ ಎದುರು ಮನೆಯಲ್ಲಿ ವಾಸವಾಗಿರುವ ಶ್ರೀ ಕೃಷ್ಣಭಟ್ಟ ಇವರನ್ನು ವಿಚಾರಿಸಿದಾಗ ವಾರಸುದಾರರು ಯಾರು ಅಂತ ಗೊತ್ತಿಲ್ಲವೆಂದು ತಿಳಿಸಿದರು. ನಂತರ ಪಂಚರ ಸಮಕ್ಷಮ ವಾಹನಗಳನ್ನು ಪರಿಶೀಲಿಸಿದಾಗ ಒಂದು ವಾಹನ ತಿಳಿಕೆಂಪು ಬಣ್ಣದ ಅಂಬಾಸೇಡರ್ ಕಾರಾಗಿದ್ದು, ಅದರ ನೋಂದಣಿ ಸಂಖ್ಯೆ: ಕೆಎ.14.ಎಂ.1708 ಇದ್ದು ವಾಹನದ ಡಿಕ್ಕಿಯಲ್ಲಿ ಶ್ರೀಗಂಧದ ಚಕ್ಕೆ ಬೇರು ತುಂಬಿದ ಗೋಣಿ ಚೀಲವನ್ನು ಹೊರತೆಗೆದು ನೋಡಿದಾಗ ಸಣ್ಣಸಣ್ಣ ಚಕ್ಕೆ ಬೇರಾಗಿದ್ದು ಅಳತೆ ಮಾಡಲು ಸಾಧ್ಯವಾಗಿಲ್ಲವಾದ್ದರಿಂದ, ತಮ್ಮಲ್ಲಿದ್ದ ತೂಕದ ಸಲಕರಣೆಯಿಂದ ತೂಕ ಮಾಡಿದಾಗ ಚೀಲದ ಸಮೇತ 20 ಕೆಜಿ ಇರುವುದು ಕಂಡು ಬಂದಿತು. ನಂತರ ಇನ್ನೊಂದು ಕಾರನ್ನು ಪರಿಶೀಲಿಸಿದಾಗ

ನೋಂದಣಿ ಸಂಖ್ಯೆ: ಎಂ.ವೈ.ಈ-5766 ಇದ್ದು, ಸದರಿ ವಾಹನದ ಡಿಕ್ಕಿಯಲ್ಲಿ ಪ್ಲಾಸ್ಟಿಕ್ ಚೀಲದಲ್ಲಿ ಶ್ರೀಗಂಧ ತುಂಬಿರುವುದನ್ನು ಕಂಡು ಹೊರತೆಗೆದು ಪರಿಶೀಲಿಸಿದಾಗ ಸಣ್ಣ ಸಣ್ಣ ಬೇರುಗಳಾದ್ದರಿಂದ ಅಳತೆ ಮಾಡಲಿಲ್ಲ, ತೂಕ ಮಾಡಿದಾಗ ಒಟ್ಟು 16 ಕೆಜಿ ಇರುವುದು ಕಂಡು ಬಂದಿತೆಂದು ತಿಳಿಸಿದರು. ಎರಡು ವಾಹನಗಳ ಸಮೇತ ಶ್ರೀಗಂಧವನ್ನು ಪಂಚರ ಸಮಕ್ಷಮ ಸರ್ಕಾರಕ್ಕೆ ಮಹಜರ್ ಮೂಲಕ ಜಪ್ತು ಮಾಡಿ ತಮ್ಮ ವಶಕ್ಕೆ ಪಡೆಯಲಾಯಿತೆಂದು ತಿಳಿಸಿದರು. ಈ ಸಂಬಂಧ ತಯಾರಿಸಿದ ಮಹಜರ್‌ನ್ನು ನೋಡಿದ್ದು ಅದು ನಿಶಾನೆ-1, ಅರಣ್ಯ ಮೊಕದ್ದಮೆ ದಾಖಲು ಮಾಡಿದ್ದರ ಬಗ್ಗೆ ಪ್ರಥಮ ವರ್ತಮಾನ ವರದಿಯನ್ನು ತಯಾರಿಸಿದ್ದು ಅದಕ್ಕೆ ನಿಶಾನೆ 2 ಎಂದು ವಾಹನ ಮತ್ತು ವಸ್ತುಗಳನ್ನು ಅಮಾನತ್ತು ಪಡಿಸಿದ ಬಗ್ಗೆ ತಯಾರಿಸಿದ ಅಮಾನತ್ತು ವರದಿಗೆ ನಿಶಾನೆ 3 ಎಂದು ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನ ಮತ್ತು ಶ್ರೀಗಂಧವನ್ನು ಮೇಲಾಧಿಕಾರಿಗಳಿಗೆ 71-ಎ ಪ್ರಕಾರ ಕ್ರಮ ಕೈಗೊಳ್ಳಲು ಕೋರಿ ಸಲ್ಲಿಸಿದ ವರದಿಯನ್ನು ನೋಡಿದ್ದು ಅದಕ್ಕೆ ನಿಶಾನೆ 4 ಎಂದು ಗುರುತಿಸಿರುವುದಾಗಿ ನುಡಿದಿರುತ್ತಾರೆ. ಮುಂದುವರಿದು ವಾಹನ ನಿಲ್ಲಿಸಿದ್ದ ಮನೆಯ ಮುಂದಿನ ಮನೆಯವರಾದ ಶ್ರೀ ಕೃಷ್ಣಭಟ್ಟ ರವರ ಹೇಳಿಕೆಯನ್ನು ಪಡೆದಿದ್ದು ಅದನ್ನು ನಿಶಾನೆ 5 ಎಂದು ಪ್ರಕರಣದಲ್ಲಿ ವಶಪಡಿಸಿಕೊಂಡ ಎರಡು ಕಾರುಗಳಲ್ಲಿ ಕೆಎ.14.ಎಂ-1708ನ್ನು ನೋಡಿದ್ದು, ಅದಕ್ಕೆ ಎಂಒ 1 ಎಂದು ಅದರಲ್ಲಿದ್ದ ಶ್ರೀಗಂಧವಿರುವ ಚೀಲಕ್ಕೆ ಎಂಒ-2 ಎಂದು, ಎಂವೈಈ-5766 ಕಾರಿಗೆ ಎಂಒ-3 ಎಂದು ಅದರಲ್ಲಿದ್ದ ಶ್ರೀಗಂಧವಿರುವ ಚೀಲಕ್ಕೆ ಎಂಒ-4 ಎಂದು ಗುರ್ತಿಸಿ ಸಾಕ್ಷಿ ನುಡಿದಿರುತ್ತಾರೆ.

ಮುಂದುವರಿದು ಸದರಿ ಸಾಕ್ಷಿಯು ವಿಜಯ ಬ್ಯಾಂಕ್ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಕಾರು ಕೆಎ.14.ಎಂ.1708 ನ್ನು ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವುದು ನಿಜವೆಂದು ಹೇಳಿದ್ದು, ಕಾರನ್ನು ವಶಪಡಿಸಿಕೊಳ್ಳುವ ವೇಳೆ ಆರ್.ಸಿ. ಪುಸ್ತಕ ಟ್ಯಾಕ್ಸ್ ಕಾರ್ಡ್ ಬಗ್ಗೆ ಯಾವುದು ಇರುವುದಿಲ್ಲವೆಂದು ಕಾರಿನ ಮಾಲೀಕರು ಯಾರು ಎನ್ನುವ ಬಗ್ಗೆ ತನಗೆ ಗೊತ್ತಿಲ್ಲ ವಿಜಯ ಬ್ಯಾಂಕಿಗೆ ಕಾರು ಹೈಪಾಥಿಕೇಶನ್ ಆಗಿರುವುದು ತನ್ನ ತಿಳುವಳಿಕೆಗೆ ಬಂದಿರುವುದಿಲ್ಲ. ಕಾರನ್ನು ಬಿಡುಗಡೆ ಮಾಡಬೇಕೆ ಎನ್ನುವ ವಿಚಾರದ ಬಗ್ಗೆ ತನ್ನ ವ್ಯಾಪ್ತಿಗೆ ಒಳಪಡುವುದಿಲ್ಲ ಎಂಬುದಾಗಿ ಹೇಳಿದ್ದಾರೆ. ಈ ಪಾಟೀ ಸವಾಲಿನಲ್ಲಿ ವಾಹನ ಮಾಲೀಕರಿಗೆ ಅಂದರೆ ವಾಹನ ಹೈಪಾಥಿಕೇಶನ ನೀಡಿದ ಬ್ಯಾಂಕಿನವರಿಗೆ ಯಾವುದೇ ಪ್ರಯೋಜನ ಆಗಿರುವುದಿಲ್ಲ ಹಾಗೂ ಮುಖ್ಯ ವಿಚಾರಣೆಗೆ ಪೂರಕವಾಗಿ ಸಾಕ್ಷಿಯನ್ನು ನೀಡಿರುತ್ತಾರೆ.

ಮೇಲ್ಕಂಡ ಸಾಕ್ಷಿದಾರರ ಹೇಳಿಕೆಯನ್ನು ಗಮನಿಸಿದಾಗ ಈ ಪ್ರಕರಣಕ್ಕೆ ಸಂಬಂಧಿಸಿದ ಕಾರುಗಳಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಆಗಿರುವುದು ದೃಢಪಡುತ್ತದೆ. ಸಾಕ್ಷಿದಾರರು ನೀಡಿರುವ ಹೇಳಿಕೆಗಳು ಹಾಗೂ ಸ್ಥಳ ಪಂಚನಾಮೆಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅವರು ನುಡಿದ ಸಾಕ್ಷಿಯು ನಂಬುವಂತಾಗಿರುತ್ತದೆ. ಅಲ್ಲದೆ ಪಾಟಿ ಸವಾಲಿನಲ್ಲಿಯೂ ಸಹ ಅರ್ಜಿದಾರರ ಪರ ವಕೀಲರು ಮಾಡಿದ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರವನ್ನು ನೀಡಿರುತ್ತಾರೆ. ಇದರಿಂದ ಫಿರ್ಯಾದುದಾರರು ದಿನಾಂಕ: 07.09.2001 ರಂದು ಸರ್ಕಾರದ ಪರ ವಶಪಡಿಸಿಕೊಂಡ ವಾಹನಗಳಲ್ಲಿ ಅಕ್ರಮವಾಗಿ ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ನಿರತವಾಗಿದ್ದಾಗ ವಶಪಡಿಸಿಕೊಂಡಿರುವುದಾಗಿ ದೃಢಪಟ್ಟಿದ್ದರಿಂದ ಅಂಶ-1ಕ್ಕೆ ಗುಣಾತ್ಮಕವಾಗಿ ಉತ್ತರಿಸುತ್ತೇನೆ.

**ಅಂಶ-2:**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಕಾರುಗಳಾದ ಎಂ.ವೈ.ಈ-5766ರ ಬಗ್ಗೆ ಉಡುಪಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ತನ್ನ ಕಚೇರಿಯ ವ್ಯಾಪ್ತಿಗೆ ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ ಅನಂತರ ಪತ್ರಿಕೆಗಳಲ್ಲಿ ಜಾಹಿರಾತು ಪ್ರಕಟಿಸಲಾಗಿದೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳವರ ವರದಿಯಂತೆ ಕೆಎ.14.ಎಂ.1708 ವಾಹನದ ಮಾಲೀಕರಾದ ಶ್ರೀ ಗೋಪಿನಾಥರವರಿಗೂ ಮತ್ತು ಹೈಪಾಥಿಕೇಶನ್ ನೀಡಿದ ಬ್ಯಾಂಕಿಗೂ ನೋಟೀಸ್ ಕಳುಹಿಸಿದ್ದು, ಈ ಬಗ್ಗೆ ಗೋಪಿನಾಥ ರವರು ವಾಹನವನ್ನು ಈಗಾಗಲೇ ಸೈಯದ್ ಅಮೀರ್ ರವರಿಗೆ ಮಾರಿದ್ದೇನೆ ಎಂದು ತಿಳಿಸಿದ ಪ್ರಕಾರ ಸೈಯದ್ ಅಮೀರ್ ರವರಿಗೆ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳುವ ಪತ್ರವನ್ನು ಕಳುಹಿಸಿದಾಗ, ಕಳುಹಿಸಿದ ಎರಡು ಪತ್ರಗಳು ವಿಳಾಸದಾರರು ಪತ್ತೆಯಾಗಿರುವುದಿಲ್ಲ ಎಂಬ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ಹೈಪಾಥಿಕೇಶನ್ ನೀಡಿದ ಬ್ಯಾಂಕ್ ಪರ ವಕೀಲರು ಹಾಜರಾಗಿರುತ್ತಾರೆ. ಆದ ಕಾರಣ ಕರ್ನಾಟಕ ಅರಣ್ಯ ಕಾಯ್ದೆ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಬಿ ಪ್ರಕಾರ ಆರ್.ಸಿ. ಮಾಲೀಕರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ-2ಕ್ಕೆ ಗುಣಾತ್ಮಕವಾಗಿ ಉತ್ತರಿಸುತ್ತೇನೆ.

**ಅಂಶ-3:**

ಈ ಪ್ರಕರಣದಲ್ಲಿ ಜಪ್ತು ಗೊಳಿಸಲಾಗಿರುವ ಕೆಎ-14-ಎಂ-1708 ವಾಹನದ ನೋಂದಣಿ ಮಾಲೀಕರಿಗೆ ಸಾಲವನ್ನು ನೀಡಿರುವ ವಿಜಯ ಬ್ಯಾಂಕ್ ಪರ ವಕೀಲರು ಸಲ್ಲಿಸಲಾಗಿರುವ ಅರ್ಜಿಯನ್ನು ಪರಿಶೀಲಿಸಲಾಗಿ ಸದರಿ ಸಂಸ್ಥೆಯ ವಾಹನ ಸಂಖ್ಯೆ: ಕೆಎ-14-ಎಂ-1708ಕ್ಕೆ ಹೈರ್‌ಪರ್ಚೆಸ್ ಅಗ್ರಿಮೆಂಟ್ ಮಾಡಿಕೊಂಡಿರುವುದಾಗಿ ತಿಳಿದುಬಂದಿತು. ಸದರಿ ವಾಹನದ ಮಾಲೀಕನು ಸಾಲ ಮರುಪಾವತಿ ಮಾಡದೇ ಇರುವುದರಿಂದ ವಾಹನದ ಮಾಲೀಕತ್ವದ ಹಕ್ಕು ಇರುತ್ತದೆ ಎಂದು ಸಾಧಿಸಲು ಪ್ರಯತ್ನಿಸಿದೆ. ಈ ಕುರಿತು ಬ್ಯಾಂಕು ತನ್ನ ಪರವಾಗಿ ಸಾಕ್ಷಿಯನ್ನು ನೀಡಲು ಈ ಪ್ರಾಧಿಕಾರದಿಂದ ಸಾಕಷ್ಟು ನೋಟೀಸ್ ಗಳನ್ನು ನೀಡಿ ಕಾಲಾವಕಾಶವನ್ನು ನೀಡಿದ್ದರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಹೇಳಿಕೆಯನ್ನು ನೀಡಿರುವುದಿಲ್ಲ. ಇದರಿಂದ ಸದರಿ ಅಪರಾಧವು ಸದರಿಯವರಿಂದ ಜರುಗಿರುವುದಿಲ್ಲ ಎಂದು ಸಿದ್ದಪಡಿಸುವಲ್ಲಿ ವಿಫಲರಾಗಿರುತ್ತಾರೆ.

ಸದರಿ ಬ್ಯಾಂಕು ವಾಹನದ ಮಾಲೀಕನೆಂದು ಒಂದು ವೇಳೆ ಪರಿಗಣಿಸಿದರೂ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ಬಾಗಿಯಾಗದಂತೆ ಯಾವುದೇ ಮುನ್ನೆಚ್ಚರಿಕೆಯನ್ನು ತೆಗೆದುಕೊಳ್ಳದೇ ಇರುವುದು ಕಂಡು ಬಂದಿರುತ್ತದೆ. 1963 ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಬಿ ಪ್ರಕಾರ ವಾಹನ ಮಾಲೀಕರಾಗಲಿ ಆತನ ಏಜೆಂಟನಾಗಲಿ ಅಥವಾ ವಾಹನವನ್ನು ಸ್ವಾಧೀನ ಹೊಂದಿದವರಾಗಲಿ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ತಮ್ಮ ತಿಳುವಳಿಕೆ ಬಾರದೇ ಉಪಯೋಗಿಸಲ್ಪಟ್ಟಿದೆ ಮತ್ತು ಈ ಅಕ್ರಮ ಚಟುವಟಿಕೆಗೆ ವಾಹನವನ್ನು ಉಪಯೋಗಿಸದಂತೆ ಅವಶ್ಯವಿರುವ ಎಲ್ಲಾ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿರುವುದನ್ನು ಸಾಕ್ಷ್ಯಾಧಾರದೊಂದಿಗೆ ಸಾಬೀತು ಪಡಿಸಬೇಕಾಗಿದ್ದು, ಬ್ಯಾಂಕಿನವರು ಈ ನಿಟ್ಟಿನಲ್ಲಿ ವಿಫಲರಾಗಿರುತ್ತಾರೆ.

ಅಲ್ಲದೆ ವಾಹನ ಮಾಲೀಕರಾದ ಶ್ರೀ ಗೋಪಿನಾಥರವರು ದಿನಾಂಕ: 15.05.2002 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ ಅರ್ಜಿಯ ಜೊತೆಗೆ ಲಗತ್ತಿಸಿದ ದಿನಾಂಕ: 20.05.2001ರ ಅಗ್ರಿಮೆಂಟಿನ ಪ್ರಕಾರ ವಾಹನವನ್ನು ಮಾರಾಟಮಾಡಿದ್ದು ಕಂಡು ಬಂದಿದೆ. ಮುಂದುವರಿದು ಸದರಿ ವಾಹನದಲ್ಲಿ ದಿನಾಂಕ: 07.09.2001 ರಂದು ವಾಹನ ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ನಿರತವಾಗಿದ್ದಾಗ ವಾಹನವನ್ನು ಇಲಾಖೆಯವರು ಜಪ್ತು ಮಾಡಿರುವುದು ಕಂಡು ಬಂದಿದೆ. ಆದರೆ ದಿನಾಂಕ: 16.10.99 ರಂದು ಶ್ರೀ ಗೋಪಿನಾಥ ರವರು ಬ್ಯಾಂಕಿನಲ್ಲಿ ಒಪ್ಪಂದ ಮಾಡಿದ್ದು ಅನಂತರ 20.05.2001 ರಂದು ವಾಹನವನ್ನು ಶ್ರೀ ಅಮೀರ್ ರವರಿಗೆ ಮಾರಾಟ ಮಾಡಿದ್ದು, ಅನಂತರ ಈ ಪ್ರಾಧಿಕಾರದಲ್ಲಿ ಜಪ್ತು ಮಾಡುವವರಿಗೂ ನೀವು ವಾಹನದ ಮೇಲೆ ಯಾವುದೇ ನಿಗಾವಹಿಸದೇ ಇರುವುದು ಕಂಡು ಬಂದಿದೆ. ನಿಗಾವಹಿಸಿದ್ದರೆ ಈ ಕೃತ್ಯವನ್ನು ತಡೆಯಬಹುದಾಗಿರುತ್ತದೆ. ಇದರಿಂದ ನೀವು ಸದರಿ ವಾಹನದ

ಮೇಲೆ ಯಾವುದೇ ನಿಗಾ ವಹಿಸದೇ ಇರುವುದರಿಂದ ಮಾಲೀಕರು ಅಥವಾ ವಾಹನ ಸುಪರ್ದಿ ಹೊಂದಿದವರು ಯಾವುದೇ ರೀತಿಯಿಂದಲೂ ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ವಹಿಸಿರುವುದಿಲ್ಲವೆಂದು ತೀರ್ಮಾನಿಸಿ ಅಂಶ-3ಕ್ಕೆ ನಕಾರತ್ಮಕವಾಗಿ ಉತ್ತರಿಸಲಾಗಿದೆ.

ಈ ಮಧ್ಯೆ ಎಂ.ವೈ.ಈ-5766ರ ವಾಹನದ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೆ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೆ ಇರುವುದರಿಂದ ಅಲ್ಲದೇ ಪ್ರಕಟಣೆಯಂತೆ 30 ದಿವಸದೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ತಿಳಿಸಿದ್ದರೂ ಕೂಡ ಯಾರೊಬ್ಬರೂ ಕೂಡ ವಾಹನದ ಮಾಲೀಕರು ಎಂದು ಹಕ್ಕು ಸ್ಥಾಪಿಸಿರುವುದಿಲ್ಲ ಮತ್ತು ಯಾವುದೇ ಅಹವಾಲು ಕೂಡ ಇಲ್ಲಿಯವರೆಗೆ ಬಂದಿರುವುದಿಲ್ಲ. ಇದರಿಂದ ಲಭ್ಯವಿರುವ ದಾಖಲಾತಿಗಳ ಆಧಾರದ ಮೇಲೆ ಏಕಪಕ್ಷೀಯ ನಿರ್ಣಯ ತೆಗೆದುಕೊಂಡು ಎಂ.ವೈ.ಈ-5766 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನ ಮಾಲೀಕರು, ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಅಲ್ಲದೇ ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿದ ಪ್ರಕರಣದ ಮಹಜರ್ ಪ್ರಥಮ ವರ್ತಮಾನ ವರದಿ ಮತ್ತು ಅಮಾನತ್ತು ವರದಿಗಳ ನಿಶಾನೆಗಳಿಂದ ಮತ್ತು ಪಿಡಬ್ಲ್ಯೂ-1 ಸಾಕ್ಷಿಯಿಂದ ದಿನಾಂಕ: 07.09.01 ರಂದು ಕೆಎ.14.ಎಂ.1708 ಮತ್ತು ಎಂ.ವೈ.ಈ-5766 ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧದ ಸಾಗಾಣಿಕೆಯಲ್ಲಿ ನಿರತವಾದುದ್ದು ದೃಢಪಡುತ್ತದೆ. ಅಲ್ಲದೆ ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿದ ದಾಖಲಾತಿಗಳು ಸಾಕ್ಷ್ಯಧಾರಗಳು ಮತ್ತು ವಾದ ವಿವಾದಗಳಿಂದ ವಾಹನ ಮಾಲೀಕರಾಗಲಿ ಇಲ್ಲವೇ ವಾಹನ ಉಸ್ತುವಾರಿ ಹೊಂದಿದವರಾಗಲಿ ವಾಹನವು ಅರಣ್ಯ ಉತ್ಪನ್ನದ ಅಕ್ರಮ ಸಾಗಾಣಿಕೆಯಲ್ಲಿ ಬಾಗಿಯಾಗದಂತೆ ಯಾವುದೇ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳುವಲ್ಲಿ ವಿಫಲರಾಗಿರುತ್ತಾರೆ. ಮೇಲೆ ವಿವರಿಸಿದಂತೆ ಅಕ್ರಮ ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿರುವ ವಾಹನಗಳಾದ ಕೆಎ-14-ಎಂ-1708 ಮತ್ತು ಎಂ.ವೈ.ಈ-5766ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಕೆ.ಎನ್. ಲಕ್ಷ್ಮೀನಾರಾಯಣ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಅಂಬಾಸೇಡರ್ ಕಾರು ನೋಂದಣಿ ಸಂಖ್ಯೆ: ಕೆಎ-14-ಎಂ-1708, ಇಂಜಿನ್ ಸಂಖ್ಯೆ: 6ಇ-ಡಿಎಇಲ್.117020 ಮತ್ತು ಛಾಸ್ಸಿ ಸಂಖ್ಯೆ: ಎಎಯು.707648 ಮತ್ತು ಎಂ.ವೈ.ಈ-5766 ಇಂಜಿನ್ ಸಂಖ್ಯೆ: ಒಡಿಎಫ್.52269 ಮತ್ತು ಛಾಸ್ಸಿ ಸಂಖ್ಯೆ: 111-420301 ಮತ್ತು ಕ್ರಮವಾಗಿ 16 ಮತ್ತು 20 ಕೆಜಿ ಒಟ್ಟು 36 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿರುತ್ತೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ: 15.07.2005 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 15.07.2005 ರಂದು ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಕೆ.ಎನ್. ಲಕ್ಷ್ಮೀನಾರಾಯಣ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | |
|---|---|
| ಶ್ರೀ ಎಂ.ಎನ್. ವಿಜಯಕುಮಾರ್ | ಪಿ.ಡಬ್ಲ್ಯೂ-1 |

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳ ವಿವರ:**

| | |
|---|---|
| ಸ್ಥಳ ಮಹಜರ್ | ನಿಶಾನೆ-ಪಿ-1 |
| ಪ್ರಥಮ ವರ್ತಮಾನ ವರದಿ | ನಿಶಾನೆ-ಪಿ-2 |
| ಅಮಾನತ್ತು ವರದಿ | ನಿಶಾನೆ-ಪಿ-3 |
| ಮೇಲಾಧಿಕಾರಿಗಳಿಗೆ ಸಲ್ಲಿಸಿದ ವರದಿ | ನಿಶಾನೆ-ಪಿ-4 |
| ಶ್ರೀ ಕೃಷ್ಣಭಟ್ಟರ ಹೇಳಿಕೆ | ನಿಶಾನೆ-ಪಿ-5 |
| ಅಂಬಾಸೇಡರ್ ಕಾರು ಸಂಖ್ಯೆ: ಕೆಎ.14.ಎಂ.1708 | ಎಂ.ಓ.1 |
| ಗೋಣಿಚೀಲಕ್ಕೆ (ಶ್ರೀಗಂಧವಿರುವ) | ಎಂ.ಓ.2 |
| ಅಂಬಾಸೇಡರ್ ಕಾರು ಸಂಖ್ಯೆ: ಎಂ.ವೈ.ಇ.-15766 | ಎಂ.ಓ.3 |
| ಚೀಲಕ್ಕೆ (ಶ್ರೀಗಂಧವಿರುವ) | ಎಂ.ಓ.4 |

ಅರ್ಜಿದಾರರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿಗಳು ಮತ್ತು ದಾಖಲಾತಿಗಳು ಇಲ್ಲ.

**ಕೆ.ಎನ್. ಲಕ್ಷ್ಮೀನಾರಾಯಣ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

ಪಿ.ಆರ್. 1112

## ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿ

**ವಿಷಯ :** ಶ್ರೀ ಬಿ.ಬಿ. ಮಧುಸೂಧನ್, ರೇಷ್ಮೆ ನಿರೀಕ್ಷಕರ ವಿರುದ್ಧದ ಶಿಸ್ತು ಕ್ರಮ ಕುರಿತಂತೆ.

**ಉಲ್ಲೇಖ :**
1) ರೇಷ್ಮೆ ಉಪನಿರ್ದೇಶಕರು, ಕೋಲಾರ ಇವರ ತಿಳುವಳಿಕೆ ಪತ್ರ ಸಂಖ್ಯೆ: ರೇಉನಿಕೋ:ಸಿಬ್ಬಂದಿ:ಶಿಸ್ತು 1:04-05, ದಿನಾಂಕ: 31.05.2004.
2) ಶ್ರೀ ಬಿ.ಬಿ. ಮಧುಸೂಧನ್, ರೇಷ್ಮೆ ನಿರೀಕ್ಷಕರು ನೀಡಿರುವ ಲಿಖಿತ ಹೇಳಿಕೆ ದಿನಾಂಕ: 9.6.2004.
3) ರೇಷ್ಮೆ ಉಪನಿರ್ದೇಶಕರು, ಕೋಲಾರ ಇವರ ತಿಳುವಳಿಕೆ ಪತ್ರ ಉನಿಕೋ:ಸಿಬ್ಬಂದಿ1:ಶಿಸ್ತು2:04-05, ದಿ: 28.06.2004.
4) ಶ್ರೀ ಬಿ.ಬಿ. ಮಧುಸೂಧನ್, ರೇಷ್ಮೆ ನಿರೀಕ್ಷಕರು ನೀಡಿರುವ ಲಿಖಿತ ಹೇಳಿಕೆ ದಿನಾಂಕ: 20.07.2004.
5) ರೇಷ್ಮೆ ಉಪನಿರ್ದೇಶಕರು, ಕೋಲಾರ ಇವರ ಪತ್ರ ಸಂಖ್ಯೆ: ಉನಿಕೋ:ಸಿಬ್ಬಂದಿ1:2:2004-05, ದಿನಾಂಕ: 21.07.2004 ಹಾಗೂ ದಿನಾಂಕ: 2.9.2004.
6) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ3: ಶಿಸ್ತು1:2004-05, ದಿನಾಂಕ: 14.09.2005.
7) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ತಿಳುವಳಿಕೆ ಪತ್ರ ಸಂಖ್ಯೆ: ಸಿಬ್ಬಂದಿ3:ಶಿಸ್ತು1:2004-05, ದಿನಾಂಕ: 29.01.2005.
8) ಶ್ರೀ ಬಿ.ಬಿ. ಮಧುಸೂಧನ್, ರೇಷ್ಮೆ ನಿರೀಕ್ಷಕರು ಇವರ ಲಿಖಿತ ಹೇಳಿಕೆ ದಿನಾಂಕ: 21.02.2005.
9) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ತಿಳುವಳಿಕೆ ಪತ್ರ ಸಂಖ್ಯೆ: ಸಿಬ್ಬಂದಿ3:ಶಿಸ್ತು1:2004-05, ದಿನಾಂಕ: 13.04.2005.
10) ಶ್ರೀ ಬಿ.ಬಿ. ಮಧುಸೂಧನ್, ರೇಷ್ಮೆ ನಿರೀಕ್ಷಕರು ದಿನಾಂಕ: 25.04.2005 ರಂದು ಕೇಂದ್ರ ಕಛೇರಿಗೆ ಹಾಜರಾಗಿ ನೀಡಿರುವ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಬಿ.ಬಿ. ಮಧುಸೂಧನ್, ರೇಷ್ಮೆ ನಿರೀಕ್ಷಕರು (ಹಾಲಿ ಅಮಾನತ್ತಿನಲ್ಲಿರುವವರು) ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಮುಳಬಾಗಿಲು ಇವರು ಈ ಹಿಂದೆ ಶೆಟ್ಟಿಹಳ್ಳಿ ರೇಷ್ಮೆ ಬಿತ್ತನೆ ಕೋಠಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಎಸಗಿರುವರೆನ್ನಲಾದ ಈ ಕೆಳಕಂಡ ಅವ್ಯವಹಾರ ಹಾಗೂ ಆರ್ಥಿಕ ದುರುಪಯೋಗ ಕುರಿತಂತೆ ರೇಷ್ಮೆ ಉಪನಿರ್ದೇಶಕರು, ಕೋಲಾರ ದಿನಾಂಕ: 31.05.2004 (ಉಲ್ಲೇಖ 1) ರಂದು ಕಾರಣ ಕೇಳಿ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಿರುತ್ತಾರೆ.

(1) ದಿನಾಂಕ: 19.09.2000 ರಿಂದ 03.09.2001ರ ಅವಧಿಯಲ್ಲಿ ತಯಾರಿಸಿದ್ದ ಮಿಶ್ರತಳಿ ರೇಷ್ಮೆ ಮೊಟ್ಟೆ ಹಣ ರೂ.46,535-00 ಜಮಾ ಮಾಡದಿರುವುದು;

(2) ದಿನಾಂಕ: 1.6.2000 ರಿಂದ 30.09.2001ರ ಅವಧಿಯ ಚಿಟ್ಟೆ ಕೊರೆದ ಗೂಡು ವಿಲೇವಾರಿ ಬಾಬ್ತು ರೂ.50,366-20 ದುರುಪಯೋಗ ಪಡಿಸಿಕೊಂಡಿರುವುದು;

(3) ತಂಡದ ಸಂಖ್ಯೆ 36 ರಿಂದ 39 ರಲ್ಲಿ ತಯರಾದ ಸುಮಾರು 27696 ಮಿಶ್ರತಳಿ ರೇಷ್ಮೆ ಮೊಟ್ಟೆ ಬಾಬ್ತು 77,548-80 ರೂ. ದುರುಪಯೋಗ ಪಡಿಸಿಕೊಂಡಿರುವುದು;

(4) ಬಿತ್ತನೆ ಕೋಠಿಯಲ್ಲಿನ ಮೊಟ್ಟೆ ಹಾಳೆ ಲೆಕ್ಕದ ವಹಿ, ಬಿಲ್ ಪುಸ್ತಕಗಳು ಪರಿಶೀಲಿಸಲು ಲಭ್ಯವಿಲ್ಲದಂತೆ ಮಾಡಿರುವುದು;

(5) ದಿನಾಂಕ: 25.11.2000 ರಿಂದ 26.03.2001ರ ಅವಧಿಯಲ್ಲಿ ಸರ್ಕಾರಕ್ಕೆ ಜಮಾ ಮಾಡಿರುವ ಬಿತ್ತನೆ ಕೋಠಿ ಹಣ ರೂ.3,57,264-00 ಗಳನ್ನು ನಗದು ಪುಸ್ತಕದಲ್ಲಿ ಲೆಕ್ಕಕ್ಕೆ ತೆಗೆದುಕೊಂಡಿಲ್ಲದಿರುವುದು;

(6) ಮಿಶ್ರತಳಿ ಮೊಟ್ಟೆ ಹಾಗೂ ಚಿಟ್ಟೆ ಕೊರೆದ ಗೂಡಿನ ಹಣ ರೂ.1,74,450-00 ಗಳ ದುರುಪಯೋಗಪಡಿಸಿಕೊಂಡಿರುವುದು.

ಸದರಿ ತಿಳುವಳಿಕೆ ಪತ್ರಕ್ಕೆ ಉತ್ತರವಾಗಿ ಶ್ರೀ ಬಿ.ಬಿ. ಮಧುಸೂಧನ್ ರವರು ಉಲ್ಲೇಖ (2)ರ ಹೇಳಿಕೆ ನೀಡಿ ತಮ್ಮ ಮೇಲೆ ಆರೋಪಿಸಿರುವ ತಾವು ವಿಶೇಷ ಸ್ವಯಂ ನಿವೃತ್ತಿಗಾಗಿ ಅರ್ಜಿ ಸಲ್ಲಿಸಿದ್ದು, ತಮ್ಮ ನಿವೃತ್ತಿ ಉಪದಾನದಡಿಯಲ್ಲಿ ಬರುವಂತಹ ಹಣದಲ್ಲಿ 1,74,450-00 ರೂ. ಕಟಾವಣೆ ಮಾಡುವಂತೆಯೂ ಹಾಗೂ ತಮ್ಮಿಂದ ಆಗಿರುವ ತಪ್ಪನ್ನು ಮನ್ನಿಸುವಂತೆ ವಿವರಿಸಿರುತ್ತಾರೆ. ಆದರೆ ಮೇಲಿನ ಆರೋಪಗಳು ಕುರಿತಂತೆ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳಡಿ ಅವಶ್ಯ ಕ್ರಮ ಜರುಗಿಸಬೇಕಾಗಿರುವುದರಿಂದ ಕೋಲಾರದ ರೇಷ್ಮೆ ಉಪನಿರ್ದೇಶಕರು ಸಿ.ಸಿ.ಎ. ನಿಯಮ 11 ರಡಿಯಲ್ಲಿ ದಿನಾಂಕ: 28.06.2004 ಉಲ್ಲೇಖ (3) ರಂದು ತಿಳುವಳಿಕೆ ಪತ್ರವನ್ನು ಜಾರಿಗೊಳಿಸಿರುತ್ತಾರೆ. ಆರೋಪಗಳು ಕೆಳಕಂಡಂತಿವೆ:-

**ಆರೋಪ-1:**

ದಿನಾಂಕ: 19.09.2000 ರಿಂದ 03.09.2001 ರವರೆಗೆ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ, ಶೆಟ್ಟಿಹಳ್ಳಿಯಲ್ಲಿ ತಯಾರಿಸಿದ್ದ 23002 ಮಿಶ್ರತಳಿ ಮೊಟ್ಟೆಗಳ ಮಾರಾಟ ಬಾಬ್ತು ರೂ.59,067-00 ಗಳನ್ನು ಸರ್ಕಾರಕ್ಕೆ ಸಂದಾಯ ಮಾಡದೆ ದುರುಪಯೋಗಪಡಿಸಿಕೊಂಡಿರುವುದು;

**ಆರೋಪ-2:**

ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ, ಶೆಟ್ಟಿಹಳ್ಳಿಯಲ್ಲಿ ಸಂಗ್ರಹವಾಗಿದ್ದ ಚಿಟ್ಟೆ ಕೊರೆದ ಗೂಡುಗಳನ್ನು ಯಶಸ್ವಿ ಬಿಡ್ಡುದಾರರಿಗೆ ವಿಲೇವಾರಿ ಮಾಡಿ ಅವರಿಂದ ಪಡೆದ ಹಣ ರೂ.41,385-00 ಗಳನ್ನು ಸರ್ಕಾರಕ್ಕೆ ಜಮಾ ಮಾಡದೆ ದುರುಪಯೋಗಪಡಿಸಿಕೊಂಡಿರುವುದು;

**ಆರೋಪ-3:**

ಅ) ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕುಣಿಗಲ್, ಹೆಬ್ಬೂರು ಮತ್ತು ಕುದೂರುಗಳಿಂದ ಬೆಲೆಪಟ್ಟಿ ಮೂಲಕ ಪಡೆದು ಒಟ್ಟು 1,23,928 ಗೂಡುಗಳನ್ನು ದಾಸ್ತಾನಿಗೆ ತೆಗೆದುಕೊಂಡಿಲ್ಲದಿರುವುದು;

ಆ) ದಾಸ್ತಾನಿಗೆ ತೆಗೆದುಕೊಳ್ಳದ ಗೂಡುಗಳನ್ನು ತಂಡದ ಸಂಖ್ಯೆ 36 ರಿಂದ 39 ರವರೆಗೆ 27,696 ಮಿಶ್ರತಳಿ ಮೊಟ್ಟೆಗಳನ್ನು ತಯಾರು ಮಾಡಿ ಸದರಿ ಮೊಟ್ಟೆಗಳ ವಿಲೇವಾರಿ ಬಾಬ್ತು ರೂ.77,459-00 ಗಳನ್ನು ಸರ್ಕಾರಕ್ಕೆ ಸಂದಾಯ ಮಾಡದೆ ಹಾಗೂ ವಿಲೇವಾರಿ ಪುಸ್ತಕಗಳಲ್ಲಿ ನಮೂದಿಸದೆ ದುರುಪಯೋಗಪಡಿಸಿಕೊಂಡಿರುವುದು;

ಇ) ತಂಡದ ಸಂಖ್ಯೆ: 36 ರಿಂದ 39 ರವರೆಗೆ ತಯಾರಿಸಿದ ಮಿಶ್ರತಳಿ ಮೊಟ್ಟೆಗಳಿಗೆ 1570 ಮೊಟ್ಟೆ ಹಾಳೆಗಳನ್ನು ಅನಧಿಕೃತವಾಗಿ ಬಳಸಿಕೊಂಡು ಸರ್ಕಾರಕ್ಕೆ ವಂಚಿಸಿರುವುದು.

ಸದರಿ ತಿಳುವಳಿಕೆ ಪತ್ರಕ್ಕೆ ಆರೋಪಿತ ನೌಕರರು ಉಲ್ಲೇಖ (4)ರ ರಕ್ಷಣಾ ಹೇಳಿಕೆಯನ್ನು ದಿನಾಂಕ: 20.07.2004 ರಲ್ಲಿ ಸಲ್ಲಿಸಿರುತ್ತಾರೆ. ಸದರಿ ಹೇಳಿಕೆಯಲ್ಲಿಯೂ ಸಹಾ ಆರೋಪಿತ ನೌಕರರು ತಮ್ಮ ಮೇಲಿನ ಆರೋಪಗಳನ್ನು ಬೇಷರತ್ತಾಗಿ ಒಪ್ಪಿಕೊಂಡು ತಾವು ಈಗಾಗಲೇ ದಿನಾಂಕ: 9.6.2004ರ ಹೇಳಿಕೆಯಲ್ಲಿ ತಿಳಿಸಿರುವಂತೆ ತಮ್ಮ ವಿಶೇಷ ಸ್ವಯಂ ನಿವೃತ್ತಿ ಅರ್ಜಿಯನ್ನು ಇತ್ಯರ್ಥಗೊಳಿಸಿ ತಮಗೆ ಬರುವಂತಹ ನಿವೃತ್ತಿ ಉಪದಾನಗಳಲ್ಲಿ ಸರ್ಕಾರಕ್ಕೆ ನಷ್ಟವಾಗಿರುವ ಹಣವನ್ನು ವಸೂಲಿ ಮಾಡಿಕೊಳ್ಳಬಹುದೆಂದು ತಿಳಿಸಿರುತ್ತಾರೆ.

ತದನಂತರ ರೇಷ್ಮೆ ಉಪನಿರ್ದೇಶಕರು, ಜಿಲ್ಲಾ ಪಂಚಾಯತ್, ಕೋಲಾರ ಇವರು ಉಲ್ಲೇಖ (5)ರ ಪತ್ರದಲ್ಲಿ ಸದರಿ ನೌಕರರ ಅವ್ಯವಹಾರದ ಸಂಬಂಧ ಕೈಗೊಂಡ ಕ್ರಮದ ಬಗ್ಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ವರದಿ ಸಲ್ಲಿಸಿ ನೌಕರರು ಎಲ್ಲಾ ಆರೋಪಗಳನ್ನು ಒಪ್ಪಿಕೊಂಡಿರುವುದರಿಂದ ಮತ್ತು ಆರೋಪಗಳು ಗುರುತರವಾಗಿರುವುದರಿಂದ ಮುಂದಿನ ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಮುಂದುವರೆದು, ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ, ಶೆಟ್ಟಿಹಳ್ಳಿಯ ಲೆಕ್ಕಪತ್ರಗಳ ತಪಾಸಣೆಯನ್ನು ಮಾಡಿಸಿದ್ದು, ಸದರಿ ತಪಾಸಣೆಯಲ್ಲಿ ಕಂಡುಬಂದಂತೆ ಅಪಾದಿತ ನೌಕರರು ಸದರಿ ಬಿತ್ತನೆ ಕೋಠಿಯಲ್ಲಿ ಮೊಟ್ಟೆಗಳ ಮಾರಾಟದ ಹಣವನ್ನು ಬ್ಯಾಂಕಿಗೆ ಇರಸಾಲು ಮಾಡಿದಂತೆ ತೋರಿಸಿ ಬ್ಯಾಂಕಿನ ಮೊಹರು ಮತ್ತು ಬ್ಯಾಂಕಿನ ಅಧಿಕಾರಿಗಳ ಸಹಿಯನ್ನು ನಕಲು ಮಾಡಿ ರೂ.2,75,492-00 ಗಳನ್ನು ಸರ್ಕಾರಕ್ಕೆ ವಂಚಿಸಿರುವ ಬಗ್ಗೆ ಸಂಬಂಧಪಟ್ಟ ದಾಖಲಾತಿಗಳನ್ನು ಸಲ್ಲಿಸಿ ಕ್ರಮ ಕೈಗೊಳ್ಳಲು ಸಹಾ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ರವರನ್ನು ಕೋರಿರುತ್ತಾರೆ.

ರೇಷ್ಮೆ ಉಪನಿರ್ದೇಶಕರು, ಕೋಲಾರ ಇವರು ಸಲ್ಲಿಸಿದ್ದ ವರದಿಯನ್ನು ಪರಿಶೀಲಿಸಲಾಗಿ ಆಪಾದಿತ ನೌಕರರು ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ, ಶೆಟ್ಟಿಹಳ್ಳಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ ಆರ್ಥಿಕ ದುರುಪಯೋಗ ಹಾಗೂ ಹಣವನ್ನು ಇರಸಾಲು ಮಾಡದೆಯೇ ಸರ್ಕಾರಕ್ಕೆ ಇರಸಾಲು ಮಾಡಿರುವುದಾಗಿ ನಕಲಿ ದಾಖಲೆಗಳನ್ನು ಸೃಷ್ಟಿಸಿರುವುದು ಗುರುತರ ಹಾಗೂ ಗಂಭೀರವಾದ ಸ್ವರೂಪದ ಕರ್ತವ್ಯ ಲೋಪವೆಂದು ಕಂಡುಬಂದಿರುವುದರಿಂದ ಉಲ್ಲೇಖ (6)ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಕಾದಿರಿಸಿ ಆಪಾದಿತ ನೌಕರರನ್ನು ಅಮಾನತ್ತಿನಲ್ಲಿ ಇಡಲಾಗಿರುತ್ತದೆ. ತದನಂತರ ಉಲ್ಲೇಖ (7) ರನ್ವಯ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮ 11 ರಡಿಯಲ್ಲಿ ಈ ಕೆಳಕಂಡ ಆರೋಪಗಳನ್ನೊಳಗೊಂಡ ತಿಳುವಳಿಕೆ ಪತ್ರವನ್ನು ಆಪಾದಿತ ನೌಕರರಿಗೆ ಜಾರಿಗೊಳಿಸಲಾಯಿತು.

**ಆರೋಪ:**

ಆಪಾದಿತ ನೌಕರರು ಶೆಟ್ಟಿಹಳ್ಳಿ ಬಿತ್ತನೆ ಕೋಠಿಯಲ್ಲಿ ಪ್ರಭಾರಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸದರಿ ಬಿತ್ತನೆ ಕೋಠಿಯಲ್ಲಿ ತಯಾರು ಮಾಡಿ ವಿಲೇವಾರಿ ಮಾಡಿದ ರೇಷ್ಮೆ ಮೊಟ್ಟೆಗಳ ಮಾರಾಟದ ಹಣ ರೂ.2,75,492-00 ಗಳನ್ನು ಸರ್ಕಾರಕ್ಕೆ ಜಮಾ ಮಾಡಿರುವಂತೆ ಖೊಟ್ಟಿ ಬ್ಯಾಂಕ್ ದಾಖಲಾತಿಗಳನ್ನು ಸೃಷ್ಟಿಸಿ ಹಣ ದುರುಪಯೋಗ ಪಡಿಸಿಕೊಂಡಿರುವುದು.

ಸದರಿ ತಿಳುವಳಿಕೆ ಪತ್ರಕ್ಕೆ ಆರೋಪಿತ ನೌಕರರು ಉಲ್ಲೇಖ (8) ರಲ್ಲಿ ಹೇಳಿಕೆಯನ್ನು ಸಲ್ಲಿಸಿ ತಮ್ಮ ಹಿಂದಿನ ಹೇಳಿಕೆಯಲ್ಲಿ ಅಂದರೆ ಉಲ್ಲೇಖ (2) ಹಾಗೂ (4) ರಲ್ಲಿ ಒಪ್ಪಿರುವಂತೆ ಈ ಆರೋಪವನ್ನೂ ಸಹಾ ಒಪ್ಪಿಕೊಂಡು ತಮ್ಮಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ತಿಂಗಳ ಸಂಬಳದಲ್ಲಿ ನಿಗದಿಪಡಿಸಿದ ಕಂತಿನಲ್ಲಾಗಲೀ ಅಥವಾ ತಮಗೆ ವಿಶೇಷ ಸ್ವಯಂ ನಿವೃತ್ತಿಯಿಂದ ಬರುವಂತಹ ಉಪಲಬ್ಧಗಳಲ್ಲಿ ಕಟಾಯಿಸಿಕೊಳ್ಳಲು ಕೋರಿರುತ್ತಾರೆ.

ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(4) ರನ್ವಯ ಜಾರಿ ಮಾಡಿದ ತಿಳುವಳಿಕೆ ಪತ್ರಕ್ಕೆ ಆಪಾದಿತರು ನೀಡಿರುವ ತಪ್ಪೊಪ್ಪಿಗೆಯು ಸ್ಪಷ್ಟವೂ, ನಿಸ್ಸಂದಿಗ್ಧವೂ ಆಗಿದ್ದಾಗ್ಯೂ ಆರೋಪಿತ ನೌಕರರಿಗೆ ಮತ್ತೊಮ್ಮೆ ಅವಕಾಶವನ್ನು ಕಲ್ಪಿಸಲು ಉಲ್ಲೇಖ (9) ರಲ್ಲಿ ತಿಳುವಳಿಕೆ ಪತ್ರ ಜಾರಿಗೊಳಿಸಿ ಆಪಾದಿತ ನೌಕರರನ್ನು ಶಿಸ್ತು ಪ್ರಾಧಿಕಾರಿಯ ಮುಂದೆ ಖುದ್ದು ಹಾಜರಾಗಿ ಪ್ರತಿಯೊಂದು ಆರೋಪದ ಬಗ್ಗೆ ಅಹವಾಲನ್ನು ಸಲ್ಲಿಸಲು ಸೂಚಿಸಲಾಗಿತ್ತು. ಅದರಂತೆ ಆಪಾದಿತ ನೌಕರನು ದಿನಾಂಕ: 25.04.2005 ರಂದು ಶಿಸ್ತು ಪ್ರಾಧಿಕಾರಿಗಳಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಮುಂದೆ ಹಾಜರಾಗಿ ಹಾಗೂ ಸದರಿ ಪ್ರಾಧಿಕಾರಿಗಳ ನಿರ್ದೇಶನದಂತೆ ಕೇಂದ್ರ ಸ್ಥಾನಿಕ ಸಹಾಯಕರು, ರೇಷ್ಮೆ ನಿರ್ದೇಶನಾಲಯ ಇವರ ಸಮಕ್ಷಮದಲ್ಲಿ ತಮ್ಮ ವಿರುದ್ಧ ಮಾಡಿರುವ ಎಲ್ಲಾ ಆರೋಪಗಳಿಗೆ ಸಂಬಂಧಪಟ್ಟಂತೆ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಈ ಹೇಳಿಕೆಯಲ್ಲಿಯೂ ಸಹಾ ಆರೋಪಿತ ನೌಕರರು ರೇಷ್ಮೆ ಉಪನಿರ್ದೇಶಕರು, ಕೋಲಾರ ಇವರು ಉಲ್ಲೇಖ (1) ಹಾಗೂ (3) ರಲ್ಲಿ ತಮ್ಮ ವಿರುದ್ಧ ಆರೋಪಿಸಿರುವ ಎಲ್ಲಾ ಆರೋಪಗಳನ್ನು ಮತ್ತು ಶಿಸ್ತು ಪ್ರಾಧಿಕಾರಿಗಳು : ರೇಷ್ಮೆ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಉಲ್ಲೇಖ (7) ರಲ್ಲಿ ಆರೋಪಿಸಿರುವ ಆಪಾದನೆಗಳಿಗೂ ತಾವೇ ಸಂಪೂರ್ಣವಾಗಿ ಜವಾಬ್ದಾರರೆಂದು ಸ್ವಇಚ್ಛೆಯಿಂದ ಒಪ್ಪಿಕೊಂಡು ಸರ್ಕಾರಕ್ಕೆ ಆಗಿರುವ ನಷ್ಟವನ್ನು ಜಮಾ ಮಾಡಲು ಬದ್ಧನಾಗಿರುತ್ತೇನೆಂದು ತಿಳಿಸಿರುತ್ತಾರೆ.

ಶ್ರೀ ಬಿ.ಬಿ. ಮಧುಸೂಧನ, ರೇಷ್ಮೆ ನಿರೀಕ್ಷಕರ ವಿರುದ್ಧ ಮಾಡಲಾದ ಎಲ್ಲಾ ಆರೋಪಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ. ಆಪಾದಿತ ನೌಕರರು ಎರಡು ಬಾರಿ ಲಿಖಿತ ಹೇಳಿಕೆ ನೀಡಿ ಮತ್ತು ಮೂರನೇ ಬಾರಿ ಸಕ್ಷಮ ಪ್ರಾಧಿಕಾರಿಗಳ ಮುಂದೆ ಹಾಜರಾಗಿ, ತಮ್ಮ ವಿರುದ್ಧದ ಎಲ್ಲಾ ಆರೋಪಗಳನ್ನು ಬೇಷರತ್ತಾಗಿ ಒಪ್ಪಿರುತ್ತಾರೆ. ಸದರಿಯವರು ಎಸಗಿರುವ ದುರ್ನಡತೆಯಿಂದ ಹಾಗೂ ಆಪಾದಿತ ನೌಕರರು ಒಪ್ಪಿರುವಂತೆ, ಸರ್ಕಾರಕ್ಕೆ ಒಟ್ಟು ರೂ.4,52,720-00 ಗಳು ನಷ್ಟವಾಗಿರುವುದು ದೃಢಪಟ್ಟಿದ್ದು, ಆರೋಪಿತ ನೌಕರನಾದ ಶ್ರೀ ಬಿ.ಬಿ. ಮಧುಸೂದನ, ರೇಷ್ಮೆ ನಿರೀಕ್ಷಕರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರನಾಗಿ ಈ ರೀತಿ ಸರ್ಕಾರಕ್ಕೆ ವಂಚಿಸಿ ಹಣ ದುರುಪಯೋಗವಾಗುವುದಕ್ಕೆ ಕಾರಣರಾಗಿರುವುದನ್ನು ಗಮನಿಸಿ ಇವರಿಗೆ ಕಠಿಣ ದಂಡನೆಯನ್ನು ವಿಧಿಸಲು ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ3:ಶಿಸ್ತು1:2004-05, ದಿನಾಂಕ: 21ನೇ ಜುಲೈ 2005**

ಮೇಲೆ ವಿವರಿಸಿರುವ ಪೀಠಿಕೆಯನ್ವಯ ಮತ್ತು 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು : ಶಿಸ್ತು ಪ್ರಾಧಿಕಾರಿಯಾದ ನಾನು ಸದರಿ ನಿಯಮ 8(VI)ರ ಮೇರೆಗೆ ಶ್ರೀ ಬಿ.ಬಿ. ಮಧುಸೂಧನ, ಹಿಂದಿನ ರೇಷ್ಮೆ ನಿರೀಕ್ಷಕರು, ಸರ್ಕಾರಿ ಮಾರಾಟ ಬಿತ್ತನೆ

ಕೋರಿ, ಶೆಟ್ಟಿಹಳ್ಳಿ, ಹಾಲಿ ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಮುಳಬಾಗಿಲು ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ದಿನಾಂಕ: 16.09.2004 ರಿಂದ ಅಮಾನತ್ತಿನಲ್ಲಿರುವ ಇವರಿಗೆ ಈ ಕೆಳಕಂಡಂತೆ ದಂಡನೆಯನ್ನು ವಿಧಿಸಲಾಗಿದೆ:

(1) ಮೇಲಿನ ನಿಯಮ 8(vi) ರನ್ವಯ ಆರೋಪಿತ ನೌಕರರನ್ನು ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದೆ.

(2) ನಿಯಮ 8(iv) ರಂತೆ ಸರ್ಕಾರಕ್ಕೆ ಉಂಟಾದ ನಷ್ಟದ ಒಟ್ಟು ಮೊಬಲಗು ರೂ. 4,52,720-00 ನ್ನು ಇವರಿಗೆ ಸರ್ಕಾರದಿಂದ ಬರಬೇಕಾದ ನಿವೃತ್ತಿ ಉಪದಾನ, ರಜೆ ನಗದೀಕರಣ ಹಾಗೂ ಪರಿವರ್ತಿತ ಪಿಂಚಣಿಗಳಿಂದ ವಸೂಲಿ ಮಾಡಲು ಆದೇಶಿಸಿದೆ. ಈ ಮೊತ್ತವು ಇನ್ನು ಬಾಕಿ ಉಳಿದ ಪಕ್ಷದಲ್ಲಿ ಇವರ ಪಿಂಚಣಿಯಿಂದ ತಿಂಗಳಿಗೆ ಕನಿಷ್ಟ ಮೊತ್ತವಾದ ರೂ. 1030-00 ನ್ನು ಮಾತ್ರ ಪಾವತಿಸಿ, ಉಳಿದ ಮೊತ್ತವನ್ನು ಪೂರ್ಣ ಮೊತ್ತ ವಸೂಲಾಗುವವರೆಗೆ ಪಾವತಿಸದಿರಲು ಆದೇಶಿಸಿದೆ.

(3) ಅಮಾನತ್ತಿನಲ್ಲಿ ಕಳೆದ ಅವಧಿಯನ್ನು (ಅಮಾನತ್ತಿನ ಅವಧಿ) ಎಂದೇ ಪರಿಗಣಿಸಿ ಆದೇಶಿಸಿದೆ.

(4) ದುರುಪಯೋಗವಾದ ಸಂಪೂರ್ಣ ಮೊತ್ತದ ವಸೂಲಾತಿ ಕುರಿತು ರೇಷ್ಮೆ ಉಪನಿರ್ದೇಶಕರು (ಜಿ.ಪಂ) ಕೋಲಾರ ಇವರಿಗೆ ನಿಗಾವಹಿಸಿ ವರದಿ ನೀಡಲು ಆದೇಶಿಸಿದೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ
ರೇಷ್ಮೆ ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರಿಗಳು.

ಪಿ.ಆರ್. 1113

**COMMERCE & INDUSTRIES DEPARTMENT,**

**NOTIFICATION NO. CI: 142 SGF: 05, Bangalore, Dated: 21st July 2005**

Whereas it is necessary to make an order with a view to enabling M/s. Nirani Sugars Ltd., Mudhol Taluk, Bagalkot District, to purchase the quantity of Sugar Cane required having regard to the crushing capacity of the factory, the availability of Sugarcane in the area where sugarcane is grown and the need for production of Sugar.

Now, therefore, in exercise of the powers conferred by clause 6,7,8 and 9 of the Sugarcane (Control) order 1966 read with CSR 1127, dated 16$^{th}$ July 1966 of the Government of India in the Ministry of Food, Agriculture, Community Development and Co-Operation (Department of Food) the Government of Karnataka hereby makes the following orders namely: -

**I. TITLE, COMMENCEMENT AND DURATION OF OPERATION:**

i. This Order may be called the Karnataka Sugarcane (Regulation of Distribution) M/s.Nirani Sugars Ltd., Mudhol, Bagalkot District order 2005.

ii. It shall come into force at once and shall remain in force till withdrawn or repealed subject to amendments as the State Government may make from time to time.

**2. DEFINITIONS: -** In this order: -

a. Factory means the premises of the factory at Mudhol. Owned by M/s. Nirani Sugars Ltd., Mudhol including the precincts of such factory.

b. 'Form' means a form appended to this order.

c. Words and expressions used in this order but not defined shall have the meaning assigned to them in clause 2 of the Sugarcane (Control) order 1966.

3. Determination of the quantity of Sugarcane required by the factory and reservation of the area for supply of sugarcane.

i. The crushing capacity of M/s. Nirani Sugars Ltd., Mudhol being 2500 TCD. The quantity of Sugarcane required by the factory during a year is about 4.5 Lakh M.Ts to 5.00 Lakh M.Ts

ii. The factory shall secure the sugarcane determined under subclause (2) from the areas specified in schedule-I to this order which shall be the area reserved temporarily in the interest of farmers for supplying sugarcane to the factory concerned, till the new factories, likely to come up in that area are established.

**4. FIXIATION OF QUANTITY OF SUGARCANE TO BE SUPPLIED BY THE GROWER: -**

Every grower of sugarcane in the area reserved temporarily as specified in Schedule-I shall supply to the factory ninety five percent of the sugarcane grown by each such grower Co-operative Society operating in the reserved area, through such society.

**5. AGREEMENT TO SUPPLY OR PURCHASE THE DETERMINED QUANTITY OF SUGARCANE.**

Every grower of sugarcane or a sugarcane grower Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4.

**6. PROHIBITION OF EXPORT OF SUGARCANE FROM AREA RESERVED TEMPORARILY.**

No. Sugarcane shall be exported from the area reserved temporarily except under and in accordance with the conditions of a permit issued by the Deputy Commissioner in Form-I of Schedule-II.

**7. ISSUE OF PERMITS:**

i. Application for the grant of a permit under clause-6 shall be made in form 2 of Schedule-II and shall be accompanied by a fee of Rs.5/- and an amount of Rs.100/- as security Deposit.

ii. If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forfeited, pass order forfeiting the whole or part of the amount deposited as security.

By Order and in the Name of the Governor of Karnataka,

**P. ANANDA KUMAR**

Desk Officer (Sugar), Commerce & Industries Department.

**SCHEDULE –I**

**List of additional Villages allotted to M/s. Nirani Sugars Ltd., Mudhol Taluk, Bagalkot District, temporarily for supply of Sugar Cane.**

| NAME OF THE TALUK & NAME OF THE VILLAGE | NAME OF THE TALUK & NAME OF THE VILLAGE |
|---|---|
| Muddebihal Taluk, Bijapur Dist. | Basavanabagevadi Taluk, Bijapur Dist. |
| 1. Kashina kunte | 1. Basavanbaghevadi |
| 2. Masuthi | 2. Ingaleshwar |
| 3. Yalugura | 3. Hathirakihal |
| 4. Budhihal | 4. Deginala |
| 5. Vadavadagi | 5. Donuru |
| 6. Hullur | 6. Embathanala |
| 7. Kalagi | 7. Bisanala |
| 8. Jatagi | 8. Naginala |
| 9. Chalami | 9. Nagura |
| 10. Madinala | 10. Nagavada |
| 11. Charachankalla | 11. Ronihala |
| 12. Kandaganura | 12. Kollara |
| 13. Mudura | 13. Halladagenuru |
| 14. Geddhalamari | 14. Jayavadagi |
| 15. Harindrala | 15. Bairavadagi |
| 16. Yarajari | 16. Dindavara |
| 17. Nagarala | 17. Kudarisalavadagi |
| 18. Handragalla | 18. Kanala |
| 19. Muddhanala | 19. Hoo.Hipparagi |
| 20. Lejagiri | 20. Angandageri |
| | 21. Araladinni |
| | 22. Gonnala |
| | 23. Nagaradinni |
| | 24. Baganagar |
| | 25. Devalapura |
| | 26. Kamankeri |
| | 27. Bommnahalli |
| | 28. Mulyala |
| | 29. Mulawada |
| | 30. Kodagi |
| | 31. Managoli |
| | 32. Ukkali |

**P. ANANDA KUMAR**

Desk Officer (Sugar), Commerce & Industries Department.

**SCHEDULE –II - FORM -I**
**(SEE CLAUSE 6)**

The Karnataka Sugarcane (Regulation of Distribution), M/s. Nirani Sugars Ltd., Mudhol Order 2005.

Permit No. Date:

| | | |
|---|---|---|
| 1. | Full name of the permit holder | |
| 2. | Father's Name | |
| 3. | Residential Address in full | |
| 4. | Quantity of Sugarcane for which permit is granted for export | |
| 5. | Area and village from which Sugarcane is permitted to be Exported. | |
| 6. | A. Place to which it is to be exported<br>B. The purpose for which export is permitted.<br>i. For Sale<br>ii. For crushing sugar cane juice for Manufacture of Gur/Sakkare Gul/Jaggery Rabi or Khandasari. | |
| 7. | Their permit is valid upto | |
| 8. | The permit is granted subject to the following terms and conditions. | |
| | a. Permit is not transferable. | |
| | b. The permit shall be produced on demand by an officer authorized by the Deputy Commissioner. | |
| | c. On expiry of the validity of the permission within 48 hours of the expiry of the validity date the permit shall be surrendered to the permit issuing authority. | |

Place:
Date:

SIGNATURE OF THE PERMIT ISSUING AUTHORITY.

**SCHEDULE –II - FORM -II**
**(SEE CLAUSE 7)**

The Karnataka Sugarcane (Regulation of Distribution), M/s. Nirani Sugars Ltd., Mudhol Order 2005.

Application for the grant of permit for exporting sugarcane from a reserved area.

| | | |
|---|---|---|
| 1. | Full Name of the Applicant | |
| 2. | Father's Name | |
| 3. | Residential Address in full | |
| 4. | Quantity of Sugarcane for which permit is requested for export | |
| 5. | Area and the village from which Sugarcane is intended to be exported | |
| 6. | The purpose for which the export is intended<br>i. For Sale<br>ii. For Crushing Sugarcane Juice or manufacture of Gur/Sakkare Gul/Jaggery/ Rabi/or Khandasari for sale or self consumption | |

I declare that, I am fully aware of the provisions of the Karnataka Sugarcane (Regulation of Distribution), M/s.Nirani Sugars Ltd., Mudhol, order 2005 and the particulars furnished in the application

are true to the best of my knowledge and belief and the permit to be issued will be properly used for the purpose for which it is issued. I have actually read-got read and understood the conditions of the permit given in Form No.I of the Schedule appended to the Karnataka Sugarcane (Regulation of Distribution),

M/s. Nirani Sugars Ltd., Mudhol, Order 2005. and I agree to abide by them.

Place:
Date:

SIGNATURE OF THE APPLICANT

**P. ANANDA KUMAR**

P.R. 1111 Desk Officer (Sugar), Commerce & Industries Department.

## ಕಾರ್ಯದರ್ಶಿಗಳ ಕಾರ್ಯಾಲಯ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು

### ಕಛೇರಿ ಆದೇಶ

**ಸಂಖ್ಯೆ: ಕಅಪ್ರಾ.ಕಾ.32/2002-03, ದಿನಾಂಕ: 13ನೇ ಜುಲೈ 2005**

**ವಿಷಯ:** ಮಾಹಿತಿ ಪಡೆಯುವ ಹಕ್ಕು ಕಾಯಿದೆ - ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನು ಹಾಗೂ ಮೇಲ್ಮನವಿ ಪ್ರಾಧಿಕಾರವನ್ನು ನೇಮಿಸುವ ಬಗ್ಗೆ - ಆದೇಶ.

**ಉಲ್ಲೇಖ:** ದಿನಾಂಕ: 11.7.2005 ರಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ನಡೆಸಿದ ಸಭೆಯಲ್ಲಿ ನೀಡಲಾದ ಸೂಚನೆಗಳು.

ಮಾಹಿತಿ ಪಡೆಯುವ ಹಕ್ಕು ಕಾಯಿದೆ - 2005ರ ಅನುಸಾರವಾಗಿ ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಒಂದು 'ಸಾರ್ವಜನಿಕ ಪ್ರಾಧಿಕಾರ' (ಪಬ್ಲಿಕ್ ಅಥಾರಿಟಿ) ವಾಗಿದ್ದು, ಈ ಕಾಯಿದೆಯ ಸೆಕ್ಷನ್ 5(1) ರನ್ವಯ ಈ ಕಛೇರಿಗೆ ಸಂಬಂಧಿಸಿದಂತೆ 'ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ' ಯನ್ನಾಗಿ ಒಬ್ಬ ಅಧಿಕಾರಿಯನ್ನು ನೇಮಿಸಬೇಕಾಗಿದೆ. ಆದ್ದರಿಂದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಈ ಕಛೇರಿಯ ಶಾಖಾಧಿಕಾರಿಗಳನ್ನು ಈ ಮೂಲಕ ನೇಮಿಸಲಾಗಿದೆ. ಅವರ ಕಛೇರಿಯ ವಿಳಾಸ ಮತ್ತು ದೂರವಾಣಿ ಸಂಖ್ಯೆಯನ್ನು ಕೆಳಗೆ ನಮೂದಿಸಲಾಗಿದೆ:-

ಶಾಖಾಧಿಕಾರಿ,
ಕಾರ್ಯದರ್ಶಿಗಳ ಕಛೇರಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ,
ಕೊಠಡಿ ಸಂಖ್ಯೆ: 201-ಎ, ವಿಧಾನಸೌಧ, ಬೆಂಗಳೂರು-1
ದೂರವಾಣಿ: 22286773, 22092239.

ಸದರಿ ಕಾಯಿದೆಯ ಸೆಕ್ಷನ್ 5-(2)ರ ಪ್ರಕಾರ ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನು ಕ್ಷೇತ್ರ ಕಛೇರಿಗಳಿಗೆ ಸಂಬಂಧಿಸಿದಂತೆ ನೇಮಕ ಮಾಡಬೇಕಾಗಿದ್ದು, ಈ ಕಛೇರಿಗೆ ಸಂಬಂಧಿಸಿದಂತೆ, ಕ್ಷೇತ್ರೀಯ ಕಛೇರಿಗಳು ಇಲ್ಲವಾದ ಕಾರಣ ಈ ಪ್ರಶ್ನೆ ಉದ್ಭವಿಸುವುದಿಲ್ಲ.

ಸದರಿ ಕಾಯಿದೆಯ ಸೆಕ್ಷನ್ 19-(1) ರಂತೆ ಮೇಲ್ಮನವಿ ಪ್ರಾಧಿಕಾರವನ್ನು ನಿಗದಿಗೊಳಿಸಬೇಕಾಗಿದ್ದು, ಅದರಂತೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿಯವರನ್ನು ಮೇಲ್ಮನವಿ ಪ್ರಾಧಿಕಾರವಾಗಿ ಈ ಮೂಲಕ ನೇಮಿಸಲಾಗಿದೆ. ಅವರ ಕಛೇರಿ ವಿಳಾಸ ಕೆಳಕಂಡಂತೆ ಇದೆ:-

ಕಾರ್ಯದರ್ಶಿಗಳು,
ಕನ್ನಡ ಅಭಿವೃದ್ಧಿ ಪ್ರಾಧಿಕಾರ,
ಕೊಠಡಿ ಸಂಖ್ಯೆ: 201-ಎ, ವಿಧಾನಸೌಧ, ಬೆಂಗಳೂರು-1
ದೂರವಾಣಿ: 22286773, 22092725

ಸದರಿ ಕಾಯಿದೆಯ ಅವಕಾಶಗಳಂತೆ, ಮೇಲ್ಕಂಡ ಅಧಿಕಾರಿಗಳು ಕಾರ್ಯ ನಿರ್ವಹಿಸಲು ಆದೇಶಿಸಲಾಗಿದೆ. ದಿನಾಂಕ: 13.7.2005ರ ಈ ದಿನ ಈ ಆದೇಶವನ್ನು ಹೊರಡಿಸಲಾಗಿದೆ.

ಕಾರ್ಯದರ್ಶಿ,

ಪಿ.ಆರ್.1114 ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ತುಮಕೂರು ವಿಭಾಗ, ತುಮಕೂರು

### ಸಾರ್ವಜನಿಕ ಪ್ರಕಟಣೆ

**ಸಂಖ್ಯೆ: ಎ8/71(ಎ) ಕ್ರೈಮ್ ನಂ.16/2003-04**

**ಸಂಖ್ಯೆ: ಎ8/71(ಎ) ವಿವ. 160/99-2000, ದಿನಾಂಕ: 7ನೇ ಜುಲೈ 2005**

ತುಮಕೂರು ಅರಣ್ಯ ವಿಭಾಗ ವ್ಯಾಪ್ತಿಯ ವಿವಿಧ ಸ್ಥಳಗಳಲ್ಲಿ ಶ್ರೀಗಂಧ ಮತ್ತು ಶ್ರೀಗಂಧದ ಎಣ್ಣೆಯನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದ ವಿವಿಧ ವಾಹನಗಳನ್ನು ಈ ಕೆಳಕಂಡ ದಿನಾಂಕಗಳಂದು ಪೊಲೀಸರು ಮಾಲು ಸಮೇತ ಹಿಡಿದು ಮೊಕದ್ದಮೆ ದಾಖಲು ಮಾಡಿ ಅಮಾನತ್ತುಪಡಿಸಿರುತ್ತಾರೆ. ಹಾಗೂ ಸದರಿ ವಾಹನಗಳಲ್ಲಿನ ಅರಣ್ಯ ಉತ್ಪನ್ನದ ಸಮೇತ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಸದರಿ ವಾಹನಗಳ ಮಾಲೀಕರು ಯಾರೂ ಸಹ ಈವರೆಗೆ ವಾಹನ ಮಾಲೀಕತ್ವದ ಬಗ್ಗೆ ಈ ಕಛೇರಿಗೆ ಸಂಪರ್ಕಿಸಿರುವುದಿಲ್ಲ. ಈ ಕೆಳಕಂಡ ವಾಹನಗಳ ಮಾಲೀಕರು ಅಥವಾ ವಾರಸುದಾರರು ಯಾರಾದರೂ ಇದ್ದಲ್ಲಿ ಅಥವಾ ತಕರಾರು ಸಮಜಾಯಿಷಿ ಏನಾದರೂ ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ 30 ದಿನಗಳ ಒಳಗೆ ಸಂಬಂಧಪಟ್ಟ ದಾಖಲೆಗಳ ಸಹಿತ ಈ ಕೆಳಕಂಡವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು ತಪ್ಪಿದಲ್ಲಿ ಈ ವಾಹನಗಳ ಮಾಲೀಕರು : ವಾರಸುದಾರರು ಯಾರು ಇಲ್ಲವೆಂದು ಏಕಪಕ್ಷೀಯವಾಗಿ ತೀರ್ಮಾನಿಸಿ ಕರ್ನಾಟಕ ಅರಣ್ಯ ನಿಯಮ 1963 ರೂಲ್ಸ್ 71(ಎ) ರೀತ್ಯಾ ವಾಹನಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಕ್ರಮ ಸಂಖ್ಯೆ | ಸ್ಥಳ ಮತ್ತು ದಿನಾಂಕ | ಅರಣ್ಯ ಉತ್ಪನ್ನ ವಶಪಡಿಸಿಕೊಂಡಿರುವ ವಿವರ | | | |
|---|---|---|---|---|---|
| | | ಅರಣ್ಯ ಉತ್ಪನ್ನದ ಪ್ರಮಾಣ | ವಾಹನದ ಮಾದರಿ ಮತ್ತು ಸಂಖ್ಯೆ | ಪತ್ತೆ ಹಚ್ಚಿದ ಅಧಿಕಾರಿಗಳು | ಅಪರಾಧ ಸಂಖ್ಯೆ |
| 1 | ತುಮಕೂರು-ಶಿರಾ ರಸ್ತೆ ಎಮ್ಮೇರಹಳ್ಳಿ ಗ್ರಾಮದ ಹತ್ತಿರ 8.02.2004 | 10 ಲೀಟರ್ ಶ್ರೀಗಂಧದ ಎಣ್ಣೆ Maruthi Car-800 | KA-01-M-2865 E.No. F8 IN 128756 C.No.FT 308-IN-106942 | ಸರ್ಕಲ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್, ಶಿರಾ | 16/2004 |
| 2 | ತುಮಕೂರು-ಶಿರಾ ರಸ್ತೆ ತಿಮ್ಮರಾಜನಹಳ್ಳಿ - ಗ್ರಾಮದ ಹತ್ತಿರ 22.12.1999 | 203 ಕೆಜಿ ಶ್ರೀಗಂಧದ ಚಕ್ಕೆಗಳು | KA-03-M-3003 Maruthi Car | ಸಬ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್ ಶಿರಾ | 160/99 |

ಪಿ.ಆರ್.1116 ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ.132, 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು-560 027**

**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ಯು.ಬಿ.ಎಫ್/1508/2005-06/478**

**ಅರ್ಜಿದಾರರು :**
1. ಪ್ರಧಾನ ವ್ಯವಸ್ಥಾಪಕರು,
2. ಶ್ರೀ ಶಾಂತಪ್ಪಣ್ಣಾ ಮಿರ್ಜಿ ಪಟ್ಟಣ ಸಹಕಾರ ಬ್ಯಾಂಕ್ ಲಿ., ಚಿಕ್ಕೋಡಿ.

**ವಿರುದ್ಧ**

**ಎದುರು ಅರ್ಜಿದಾರರು:**
1) (ಅ) ಶ್ರೀ ಮಾಧವ ನಂದಕುಮಾರ ದೇಶಪಾಂಡೆ,
(ಬ) ಶ್ರೀ ವಿವೇಕ ನಂದಕುಮಾರ ದೇಶಪಾಂಡೆ,
2) ದಿ: ಶ್ರೀ ನಂದಕುಮಾರ ರಘುನಾಥ ದೇಶಪಾಂಡೆ, ಇವರ ವಾರಸುದಾರರು:
(ಅ) ಶ್ರೀ ಮಾಧವ ನಂದಕುಮಾರ ದೇಶಪಾಂಡೆ,
(ಬ) ಶ್ರೀ ವಿವೇಕ ನಂದಕುಮಾರ ದೇಶಪಾಂಡೆ,
(ಕ) ಶ್ರೀಮತಿ ಸವಿತಾ ನಂದಕುಮಾರ ದೇಶಪಾಂಡೆ,
3) ಶ್ರೀಮತಿ ಸವಿತಾ ನಂದಕುಮಾರ ದೇಶಪಾಂಡೆ,
ಮೇಲ್ಕಂಡವರೆಲ್ಲರ ವಿಳಾಸ: ನಂ.1268, ರಾಮಲಿಂಗಖಿಂಡಗಲ್ಲಿ, ಬೆಳಗಾವಿ.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಆದೇಶದ ಸ್ಥಿರೀಕರಣ**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ದಿನಾಂಕ: 31.05.2005 ರವರೆಗೆ ಅಸಲು ಮತ್ತು ಬಡ್ಡಿ ಸೇರಿ ಒಟ್ಟು ರೂ.49,43,094.00 (ನಲವತ್ತೊಂಬತ್ತು ಲಕ್ಷದ ನಲವತ್ಮೂರು ಸಾವಿರದ ತೊಂಬತ್ನಾಲ್ಕು ಮಾತ್ರ) ಗಳನ್ನು ಹಾಗೂ ದಿನಾಂಕ: 01.06.2005 ರಿಂದ ಶೇ.18 ರಂತೆ ಬಡ್ಡಿಯೊಂದಿಗೆ ವಸೂಲು ಮಾಡಲು ವಾದಿಪರ ತೀರ್ಪು ಮತ್ತು ಡಿಕ್ರಿ ಮಾಡಲು ಕೋರಿರುತ್ತಾರೆ.
2. ವಾದಿಯ ಈ ದಾವಾ ಅರ್ಜಿಯನ್ನು ದಾವೆ ಸಂಖ್ಯೆ: ಜೆಆರ್‌ಡಿ/ಯುಬಿಎಫ್/1508/2005-06 ರನ್ವಯ ಈ ನ್ಯಾಯಾಲಯದ ಕಡತದಲ್ಲಿ ತೆಗೆದುಕೊಳ್ಳಲಾಗಿದೆ.
3. 1ನೇ (ಅ) ಮತ್ತು (ಬ) ಪ್ರತಿವಾದಿಗಳು ತಾವು ಪಡೆದಿರುವ ಸಾಲಕ್ಕೆ ಪ್ರಾಮಿಸ್ಸರಿ ನೋಟ್ ಮತ್ತು ಸಾಲದ ಕರಾರು ಪತ್ರವನ್ನು ಬರೆದುಕೊಟ್ಟಿರುತ್ತಾರೆ ಹಾಗೂ 2 ಮತ್ತು 3ನೇ ಪ್ರತಿವಾದಿಗಳು 1ನೇ (ಅ) (ಬ) ಪ್ರತಿವಾದಿಗಳು ಪಡೆದಿರುವ ಸಾಲಕ್ಕೆ ಜಾಮೀನು ಪತ್ರ ಬರೆದುಕೊಟ್ಟಿರುತ್ತಾರೆ.
4. ಪ್ರತಿವಾದಿ 1(ಅ) ಮತ್ತು (ಬ) ಇವರ ಆಸ್ತಿಯನ್ನು ಮಾರಾಟ ಮಾಡಿದರೂ ಬ್ಯಾಂಕಿಗೆ ಬರಬೇಕಾದ ಸಾಲದ ಮೊತ್ತ ಬರುವುದಿಲ್ಲ ಹಾಗೂ ಪ್ರತಿವಾದಿ ನಂ.3 ಇವರು ತಮ್ಮ ಹೆಸರಿನಲ್ಲಿರುವ ಆಸ್ತಿಯನ್ನು ಮಾರಾಟ ಯಾ ವರ್ಗಾವಣೆ ಮಾಡುವ ಉದ್ದೇಶ ಹೊಂದಿರುವ ಕಾರಣ ಅವರ ಆಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಲು ಆದೇಶಿಸಬೇಕೆಂದು ವಾದಿಯವರು ಕೋರಿರುತ್ತಾರೆ.
5. ವಾದಿಯು ಈ ದಾವಾ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಅರ್ಜಿಯನ್ನು ಸಲ್ಲಿಸಿ 1ನೇ (ಅ) ಮತ್ತು (ಬ) ಪ್ರತಿವಾದಿಗಳು ವಾದಿ ಬ್ಯಾಂಕಿಗೆ ಅಡವಿಟ್ಟಿರುವ ಸ್ಥಿರಾಸ್ತಿ ಮತ್ತು 3ನೇ ಪ್ರತಿವಾದಿಯ ಹೆಸರಿನಲ್ಲಿರುವ ದಾವಾ ಅರ್ಜಿಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಜಪ್ತಿ ಮಾಡಲು ತೀರ್ಪು ಪೂರ್ವ ಜಪ್ತಿ ಆದೇಶ (Attachment Before Judgement) ವನ್ನು ನೀಡುವಂತೆ ಕೋರಿರುತ್ತಾರೆ.
6. 1ನೇ (ಅ) ಮತ್ತು (ಬ) ಪ್ರತಿವಾದಿಗಳು ವಾದಿ ಬ್ಯಾಂಕಿಗೆ ಅಡವಿಟ್ಟಿರುವ ಹಾಗೂ 3ನೇ ಪ್ರತಿವಾದಿಯ ಹೆಸರಿನಲ್ಲಿರುವ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು / ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ತೀರ್ಪು / ಡಿಕ್ರಿ ನೀಡಿದ್ದರೂ ಸದರಿ ತೀರ್ಪು / ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿ ಬ್ಯಾಂಕಿಗೆ ಬರಬೇಕಾದ ಮೊಬಲಗನ್ನು ವಸೂಲು ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಹಾಗೂ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಿದಲ್ಲಿ ಪ್ರತಿವಾದಿಗಳಿಗೆ ಯಾವುದೇ ರೀತಿಯ ಆರ್ಥಿಕ ನಷ್ಟ ಮತ್ತು ತೊಂದರೆಯಾಗುವುದಿಲ್ಲವೆಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.
7. ವಾದಿಯ ದಾವಾ ಅರ್ಜಿ ಮತ್ತು ಅಫಿಡೇವಿಟ್‌ನೊಂದಿಗೆ ದಾಖಲಿಸಿರುವ ಕಲಂ 103ರ ಅರ್ಜಿ ಮತ್ತು ದಾಖಲಾತಿಗಳನ್ನು ಕೂಲಂಕುಶವಾಗಿ ಪರಿಶೀಲಿಸಿದ್ದು ಈ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 1ನೇ (ಅ) ಮತ್ತು (ಬ) ಮತ್ತು 3ನೇ ಪ್ರತಿವಾದಿಯ ಷೆಡ್ಯೂಲಿನಲ್ಲಿ ನಮೂದಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪು / ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

8. ಮೇಲೆ ವಿವರಿಸಿರುವ ಪರಿಸ್ಥಿತಿಯಲ್ಲಿ ದಿನಾಂಕ: 06.06.2005 ರಂದು ಹೊರಡಿಸಿದ ಆದೇಶದನ್ವಯ 1ನೇ (ಅ) ಮತ್ತು (ಬ) ಮತ್ತು 3ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಆದೇಶದ ಷೆಡ್ಯೂಲಿನಲ್ಲಿ ನಮೂದಿಸಿದ ಜಮೀನು ಹಾಗೂ ಅಲ್ಲಿರುವ ಕೃಷಿಪೂರಕ ಕಟ್ಟಡಗಳನ್ನು ಆದೇಶದಲ್ಲಿ ನಮೂದಿಸಿರುವ ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿಗೆ ಆದೇಶವನ್ನು ಮಾಡಲಾಗಿತ್ತು.

ಪ್ರತಿವಾದಿಗಳು ಆದೇಶದಲ್ಲಿ ನಿಗದಿಪಡಿಸಿದ ಮೊತ್ತ ಹಾಗೂ ನಿಗದಿಪಡಿಸಿದ ದಿನಾಂಕದೊಳಗಾಗಿ ಪಾವತಿಸಲು ವಿಫಲವಾಗಿರುತ್ತಾರೆ. ಆದ್ದರಿಂದ ಷರತ್ತಿಗೊಳಪಟ್ಟು ನೀಡಲಾಗಿದ್ದ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸುವುದು ಅಗತ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ ಸಿಎಂಡಬ್ಲ್ಯೂ 191 ಸಿಎಲ್ಎಂ 2004 (ಭಾಗ-1) ದಿನಾಂಕ: 02.02.2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಆರ್.ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ದಿನಾಂಕ: 06.06.2005 ರಂದು ನೀಡಲಾದ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ಮೂಲಕ ಸ್ಥಿರೀಕರಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 19.07.2005 ರಂದು ನೀಡಿರುತ್ತೇನೆ.

**ಆರ್.ಎಂ. ನಟರಾಜ್**

ಪಿ.ಆರ್. 1118

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

## ಅರಣ್ಯ ಇಲಾಖೆ

### ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ತುಮಕೂರು (ಪ್ರಾದೇಶಿಕ) ವಿಭಾಗ, ರಾಮಕೃಷ್ಣ ನಗರ, ಕುಣಿಗಲ್ ರಸ್ತೆ, ತುಮಕೂರು-572105

### ಅಧಿಕೃತ ಜ್ಞಾಪನ

**ಪತ್ರ ಸಂಖ್ಯೆ: ಎ4 ಸಿಬ್ಬಂದಿ:ಅಗೈಹಾಜರಿ:ವಿವ.109/1997-98, ದಿನಾಂಕ: 14ನೇ ಜುಲೈ 2005**

**ವಿಷಯ :** ಶ್ರೀ ನಾಗರಾಜು, ಅರಣ್ಯವೀಕ್ಷಕ, ಗುಬ್ಬಿ ವಲಯ ರವರು ಅನಧಿಕೃತ ಗೈರು ಹಾಜರಾಗಿರುವುದರಿಂದ ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ :** 1. ವಲಯ ಅರಣ್ಯಾಧಿಕಾರಿ, ಗುಬ್ಬಿ ವಲಯ, ಗುಬ್ಬಿ ರವರ ಕಛೇರಿ ಪತ್ರ ಸಂಖ್ಯೆ: ವಅಅ:ಗುಬ್ಬಿ:ವಿವ:127/04-05, ದಿನಾಂಕ: 26.2.2005.

2. ಈ ಕಛೇರಿ ಷೋಕಾಸ್ ನೋಟೀಸ್ ಸಂಖ್ಯೆ: ಎ4 ಸಿಬ್ಬಂದಿ:ವಿವ:109/1997-98, ದಿನಾಂಕ: 19.6.2005.

**ಪ್ರಸ್ತಾವನೆ:**

ಶ್ರೀ ನಾಗರಾಜು, ಅರಣ್ಯವೀಕ್ಷಕ, ಗುಬ್ಬಿ ವಲಯ ಇವರು ದಿನಾಂಕ: 22.5.1997 ರಿಂದ 12.1.2003 ರವರೆಗೆ ಹಾಗೂ 1.4.2003 ರಿಂದ ಈವರೆಗೆ ಸರ್ಕಾರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ. ಸದರಿ ನೌಕರರ ಅನಧಿಕೃತ ಗೈರು ಹಾಜರಾದ ಬಗ್ಗೆ ಕಾರಣ ಕೇಳಿ ನೋಟೀಸ್‌ಗಳನ್ನು 8.7.97, 22.8.97, 22.12.97, 2.1.98, 7.1.98, 17.5.99, 10.11.2000, 29.11.2000 ರಂತೆ ಸದರಿ ನೌಕರರ ಸ್ವಂತ ವಿಳಾಸಕ್ಕೆ ನೋಂದಾಯಿತ ಅಂಚೆಯಲ್ಲಿ ರವಾನಿಸಲಾಗಿದೆ. ಆದಾಗ್ಯೂ ಸದರಿ ನೌಕರರು ಕರ್ತವ್ಯಕ್ಕೆ ಮರಳಿ ಹಾಜರಾಗಿರುವುದಿಲ್ಲ. ಅನಧಿಕೃತ ಗೈರು ಹಾಜರಿ ಬಗ್ಗೆ ದೋಷಾರೋಪಣೆ ಪಟ್ಟಿಯನ್ನು ಸಹ ಸದರಿ ನೌಕರರಿಗೆ ಜಾರಿ ಮಾಡಿದ್ದು ಇಲಾಖಾ ವಿಚಾರಣೆಯನ್ನು ಸಹ ನಡೆಸಲಾಗಿದ್ದು, ವಿಚಾರಣಾಧಿಕಾರಿಗಳು ಈ ಕಛೇರಿಗೆ ಸಲ್ಲಿಸಿದ್ದ ವಿಚಾರಣಾ ವರದಿಯನ್ನು ಸದರಿ ನೌಕರರಿಗೆ ಜಾರಿ ಮಾಡಲಾಗಿದೆ. ಶ್ರೀ ನಾಗರಾಜು, ಅರಣ್ಯವೀಕ್ಷಕ ಇವರು ಸರ್ಕಾರಿ ಕೆಲಸಕ್ಕೆ ದೀರ್ಘಕಾಲ ಗೈರು ಹಾಜರಾಗಿರುವುದರಿಂದ ಇವರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಉಲ್ಲೇಖ 1ರ ಪತ್ರದಲ್ಲಿ ವಲಯ ಅರಣ್ಯಾಧಿಕಾರಿ, ಗುಬ್ಬಿ ರವರು ಶಿಫಾರಸ್ಸು ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಶ್ರೀ ನಾಗರಾಜು, ಅರಣ್ಯವೀಕ್ಷಕ ಇವರ ಸ್ವಂತ ವಿಳಾಸಕ್ಕೆ ಅಂತಿಮವಾಗಿ ಈ ಕಛೇರಿ ಷೋಕಾಸ್ ನೋಟೀಸ್ ಸಂಖ್ಯೆ: ಎ4 ಸಿಬ್ಬಂದಿ:ವಿವ:109/1997-98 ದಿನಾಂಕ: 17.6.05 ರಂತೆ ಮತ್ತೊಮ್ಮೆ ನೋಂದಾಯಿತ ಅಂಚೆಯಲ್ಲಿ ರವಾನಿಸಿದ್ದು ಸದರಿ ವಿಚಾರಣಾ ವರದಿಗೆ ಸಂಬಂಧಿಸಿದಂತೆ ಅವರು ಹೇಳುವ ಅಹವಾಲು ಏನಾದರೂ ಇದ್ದಲ್ಲಿ ಒಂದು ವಾರದೊಳಗೆ ಲಿಖಿತವಾಗಿ ಸಮಜಾಯಿಷಿಯನ್ನು ಈ ಕಛೇರಿಗೆ ಒಪ್ಪಿಸಲು ಸೂಚಿಸಲಾಗಿತ್ತು ಇಲ್ಲವಾದಲ್ಲಿ ಸದರಿ ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸುವುದಾಗಿಯೂ ಸಹ ಸದರಿ ನೋಟೀಸ್‌ನಲ್ಲಿ ತಿಳಿಸಲಾಗಿತ್ತು. ಸದರಿ ನೌಕರರು ಈ ನೋಟೀಸ್ ಅನ್ನು ದಿನಾಂಕ: 21.06.2005 ರಂದು ಪಡೆದುಕೊಂಡು ಸ್ವೀಕೃತಿ ನೀಡಿರುತ್ತಾರೆ. ಆದರೆ ಈವರೆವಿಗೂ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಶ್ರೀ ನಾಗರಾಜು, ಅರಣ್ಯವೀಕ್ಷಕ ಗುಬ್ಬಿ ವಲಯ ಇವರನ್ನು ಸರ್ಕಾರಿ ಕೆಲಸದಿಂದ ವಜಾ ಮಾಡಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ವಯ ಶ್ರೀ ನಾಗರಾಜು, ಅರಣ್ಯವೀಕ್ಷಕ, ಗುಬ್ಬಿ ವಲಯ ಇವರು ದಿನಾಂಕ: 22.5.97 ರಿಂದ 12.1.2003 ರವರೆಗೆ ಹಾಗೂ 1.4.2003 ರಿಂದ ಈವರೆಗೆ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುವುದು ದೃಢಪಟ್ಟಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ನಾಗರಾಜು, ಅರಣ್ಯವೀಕ್ಷಕ ಗುಬ್ಬಿ ವಲಯ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿ, ಸರ್ಕಾರಿ ಕೆಲಸದಿಂದ ಕಾರ್ಯವಿಮುಕ್ತಿಗೊಳಿಸಿ ಆದೇಶಿಸಿದೆ.

ಪಿ.ಆರ್.1117

ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

